# ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಕೆ.ಎಸ್.ನರಸಿಂಹಸ್ವಾಮಿಯವರ ಸಮಗ್ರ ಕಾವ್ಯ ಮಲ್ಲಿಗೆಯ ಮಾಲೆ ಕವನಸಂಕಲನದಲ್ಲಿ ಸ್ತ್ರೀ ಸಂವೇದನೆ

2016-17 ನೇ ಸಾಲಿನ ಕನ್ನಡ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ

ನೋ.ಸಂ. 161201030058



ಸಾಹಿತ್ಯ ಅಧ್ಯಯನ ವಿಭಾಗ

ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-58327

# ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಎಸ್.ನರಸಿಂಹಸ್ವಾಮಿಯವರ ಸಮಗ್ರ ಕಾವ್ಯ ಮಲ್ಲಿಗೆಯ ಮಾಲೆ ಕವನಸಂಕಲನದಲ್ಲಿ ಸ್ತ್ರೀ ಸಂವೇದನೆ

2016-17 ನೇ ಸಾಲಿನ ಕನ್ನಡ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ

ನೋ.ಸಂ. 161201030058





ಸಾಹಿತ್ಯ ಅಧ್ಯಯನ ವಿಭಾಗ

ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-58327

## ಅಧ್ಯಾಯ-1

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಾಹಿತ್ಯ ಕ್ಷೇತ್ರದಲ್ಲಿ ನಾವು ಯಾವುದೇ ಕಾರ್ಯಗಳನ್ನು ಕೈಗೊಳ್ಳಬೇಕಾದರೆ ಅದಕ್ಕೆ ಒಂದು ಉದ್ದೇಶ ಇರಲೇಬೇಕು. ಮನುಷ್ಯ ದಿನ ನಿತ್ಯದ ಬದುಕಿನಲ್ಲಿ ಕೈಗೊಳ್ಳುವ ಪ್ರತಿಯೊಂದು ಕೆಲಸದ ಹಿಂದೆ ಒಂದಲ್ಲ ಒಂದು ಉದ್ದೇಶ ಇದ್ದೇ ಇರುತ್ತದೆ. ಆದೇ ರೀತಿ ಈ ಸಂಪ್ರಬಂಧದ ರಚನೆಗೂ ಕೂಡ ಉದ್ದೇಶವಿದೆ. ಕನ್ನಡ ಸಾಹಿತ್ಯವು ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿದೆ. ಹಲವಾರು ಮಹಾನ್ ಕವಿ, ಲೇಖಕರ ಸತ್ವಯುತವಾದ ಸಾವಿರಾರು ಕಲಾಕೃತಿಗಳನ್ನು ತನ್ನ ಅಂತರಂಗದಲ್ಲಿ ಅಡಗಿಸಿಕೊಂಡಿದೆ. ಹೀಗೆ ನಮ್ಮ ಸಾಹಿತ್ಯ ಆರಂಭದಿಂದ ಇಂದಿನವರೆಗೆ ಅನೇಕ ಘಟ್ಟಗಳಲ್ಲಿ ರೂಪುಗೊಳ್ಳುತ್ತ ಬಂದಿದೆ.

ಸಾಹಿತ್ಯ ಘಟ್ಟಗಳನ್ನು ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂದು ವಿಭಾಗ ಮಾಡಲಾಗಿದೆ. ಮತ್ತೆ ಅಧ್ಯಯನದ ಉದ್ದೇಶಕ್ಕಾಗಿ ಹೊಸಗನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ-ಬಂಡಾಯ ಎಂದು ಮರು ವಿಭಾಗ ಮಾಡಿಕೊಳ್ಳಲಾಗಿದೆ.

ವೇದಗಳ ಕಾಲದಿಂದ ಹಿಡಿದು ಇಂದಿನವರೆಗೂ ಸ್ತ್ರೀಯನ್ನು ಕೀಳಾಗಿ ಶೋಷಣೆ ಮಾಡುತ್ತಾ ಬರಲಾಗಿದೆ. ಮಹಿಳೆಯ ಸಂಕಷ್ಟಗಳನ್ನು, ಜೀವನದ ರೀತಿ ನೀತಿಗಳನ್ನು, ನೋವು ನಲಿವು, ಸುಖ-ದುಃಖಗಳನ್ನು ಸಮರ್ಥವಾಗಿ ಕಟ್ಟಿಕೊಡಲು ಕಾವ್ಯ ಪ್ರಕಾರವು ಹಲವು ನೆಲೆಗಟ್ಟಿನಲ್ಲಿ ಮೂಡಿ ಬಂದಿದೆ. ಇಂದಿನ ಔದ್ಯೋಗಿಕ ಯುಗದಲ್ಲಿ ಬಿಡುವಿಲ್ಲದೆ ದುಡಿಯುತ್ತಿರುವ ಜನರ ಮನಸ್ಸನ್ನು ಕಾವ್ಯಗಳು ಆಕರ್ಷಿಸಿವೆ. ಮೈಸೂರು ಮಲ್ಲಿಗೆ, ದುಂಡುಮಲ್ಲಿಗೆಯಂತಹ ಕಾವ್ಯ ಸಂಕಲನಗಳು ಸಾಗರೋಪಾದಿಯಾಗಿ ಮೂಡಿ ಬಂದು ಸ್ತ್ರೀ ಸಂವೇದನೆಯನ್ನು ಕುರಿತ ತುಡಿತದ ಚಿತ್ರಣವಿದೆ.

ಹದಿನೇಳನೆಯ ಶತಮಾನದಲ್ಲಿದ್ದ ಸಂಚಿಯ ಹೊನ್ನಮ್ಮಳು ಹೆಣ್ಣನ್ನು ಅಸಡ್ಡೆ ಮಾಡುವವವರನ್ನು ಕುರಿತು

"ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು

ಕಣ್ಣು ಕಾಣದ ಗಾವಿಲರು

ಪೆಣ್ಣಲ್ಲವೆ ನಮ್ಮನ್ನೆಲ್ಲ ಪೊರೆದವಳು"

ಎಂದು ಹೇಳಿ ಹೆಣ್ಣಿನ ಶ್ರೇಷ್ಠತೆಯನ್ನು ಎತ್ತಿ ಹಿಡಿದು ಸ್ತ್ರೀ ಸಮಾನತೆಯನ್ನು ಸಾರಿದ್ದಾಳೆ. ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಕಾವ್ಯ, ಕಥೆ, ಕಾದಂಬರಿ, ನಾಟಕ ವಿಮರ್ಶೆ, ಆತ್ಮಕಥೆಗಳ ಮೂಲಕ ಸ್ತ್ರೀ ಸಂವೇದನೆಯ ತುಡಿತವಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕೆ.ಎಸ್.ನರಸಿಂಹಸ್ವಾಮಿಯವರ ಸಮಗ್ರ ಕಾವ್ಯ ಮಲ್ಲಿಗೆಯ ಮಾಲೆ ಕವನ ಸಂಕಲನದಲ್ಲಿ ಸ್ತ್ರೀ ಸಂವೇದನೆ ಎಂಬ ಶೀರ್ಷಿಕೆಯಡಿಯಲ್ಲಿ ಮಹಿಳೆಯ ವಿಶಿಷ್ಟವಾದ ಭಾವನಾತ್ಮಕ ಬೌದ್ಧಿಕ ಪ್ರತಿಕ್ರಿಯೆ, ಆಚಾರ ವಿಚಾರ, ಸಂಪ್ರದಾಯ, ಜೀವನ ವಿಧಾನ, ಸಾಂಸ್ಕೃತಿಕ, ಸಾಮಾಜಿಕ ರಾಜಕೀಯ ವ್ಯವಸ್ಥೆಯಲ್ಲಿ ಸ್ತ್ರೀಯರ ನೈಜ ಚಿತ್ರಣವನ್ನು ಅರಿಯುವುದು, ಸಮಾಜದಲ್ಲಿ ಸ್ತ್ರೀಯರ ಸಮಸ್ಯೆಗಳಿಗೆ ಪರಿಹಾರ ಕ್ರಮಗಳನ್ನು ಕೈಗೊಳ್ಳುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಪರಂಪರಾಗತವಾಗಿ ಬಂದ ಸ್ತ್ರೀ ಮೌಲ್ಯಗಳು ಹಾಗೆಯೇ ಅನೇಕ ಶತಮಾನಗಳವರೆಗೆ ಸ್ಥಾಯಿಯಾಗಿ ಉಳಿದುಬರಲು ಧರ್ಮ, ಆಧ್ಯಾತ್ಮಿಕ ತತ್ವಗಳು ಹಾಗೂ ಸಂಪ್ರದಾಯಬದ್ಧ ಶ್ರೇಣೀಕೃತ ವ್ಯವಸ್ಥೆಯ ಕಾರಣ.

ಕಾಲಾಂತರದಲ್ಲಿ ಸಾಂಸ್ಕೃತಿಕವಾಗಿ ಸಮಾಜವು ಸ್ಥಿತ್ಯಂತರವನ್ನು ಹೊಂದಿತು. ಸ್ವಾತಂತ್ರ ಚಳುವಳಿ, ಪಾಶ್ಚಾತ್ಯ ಶಿಕ್ಷಣ, ಸುಧಾರಣಾ ಚಳುವಳಿಗಳು ಜನರನ್ನು ಜಾಗೃತಗೊಳಿಸಿದವು. ಇದರ ಜೊತೆಯಲ್ಲಿ ಸ್ತ್ರೀ ಸುಧಾರಣಾ ಮೌಲ್ಯಗಳ ಚಳುವಳಿಗಳು ಪ್ರಾರಂಭವಾಗಿ ಇವುಗಳಿಂದ ಪ್ರಭಾವಿತರಾದ ಮಹಿಳೆಯರು ಪರಂಪರೆಯ ಮೌಲ್ಯಗಳನ್ನು ಪ್ರಶ್ನಿಸುವ ಧೈರ್ಯ ತಳೆದರು. ಕನ್ನಡ ಸಾಹಿತ್ಯದಲ್ಲಿ ಕಾವ್ಯದ ಬಗ್ಗೆ ಗಂಭೀರ ಚಿಂತನೆಗಳು, ಕವಿ ಕೆ.ಎಸ್.ನರವರ ಕವಿತೆಗಳಲ್ಲಿ ನವೋದಯ ಕನ್ನಡ ಕಾವ್ಯದ ಪ್ರೇರಣೆ ತುಂಬಿದೆ.

ಕನ್ನಡ ಸಾಹಿತ್ಯಾಭಿಮಾನಿಗಳಿಗೆ ನವೋದಯ ಕವಿಗಳ ಹೆಸರು ಅಪರಿಚಿತವೇನಲ್ಲ. ಆದರೆ ಸಾಹಿತ್ಯವನ್ನು ಅಧ್ಯಯನ ಮಾಡದ ಸಾಮಾನ್ಯನಿಗು ಪರಿಚಿತರಾದ ಕವಿಗಳಲ್ಲಿ ಕೆ.ಎಸ್.ನರಸಿಂಹಸ್ವಾಮಿ ಕೂಡ ಒಬ್ಬರು. ಇವರು ಜನಪ್ರಿಯ ಶ್ರೇಷ್ಠ ಕವಿಯಾಗಿದ್ದಾರೆ. ಅವರ ಮೈಸೂರುಮಲ್ಲಿಗೆ ಕೃತಿಯು ಕರ್ನಾಟಕದ ಮಲ್ಲಿಗೆಯಾಗಿ, ಕನ್ನಡ ಮಲ್ಲಿಗೆಯಾಗಿ ಕನ್ನಡಿಗರ ಮನ-ಮನೆಯಲ್ಲಿ ಬೇರೂರಿದೆ ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಕಳೆದರೂ ಇಂದಿಗೂ ಅಂದಿನ ಶುಭ್ರತೆ, ನವುರು, ನರುಗಂಪನ್ನು ಸೂಸುತ್ತಲೆ ಇದೆ. ಭಾರತೀಯ ಶುಚಿ ಸಂಸ್ಕೃತಿಯ ಒಲವಿನ ಮುಖವನ್ನು ಅಧಿಕೃತವಾಗಿ ದಾಖಲಿಸಿದೆ.

ಈ ಪ್ರಬಂಧದ ಅಧ್ಯಯನಕ್ಕೆ ಕೆ.ಎಸ್.ನವರ ಸಮಗ್ರ ಕಾವ್ಯ ಸಂಕಲನ ಮಲ್ಲಿಗೆಯ ಮಾಲೆಯನ್ನು ಆಯ್ದುಕೊಳ್ಳಲಾಗಿದೆ. ಈ ಸಂದರ್ಭದಲ್ಲಿ ವಿವಿಧ ಲೇಖಕ-ಕಿಯರ ವಿಚಾರ, ಅನಿಸಿಕೆಗಳು, ಪ್ರಕಟವಾದ ವಿಷಯಗಳನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಈ ಸಂಪ್ರಬಂಧದ ಮೊದಲನೆ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯು ವಿವರವಾಗಿ ಚಿತ್ರಿತವಾಗಿದೆ. ಎರಡನೇಯ ಅಧ್ಯಾಯದಲ್ಲಿ ಕವಿ ಕೆ.ಎಸ್.ನವರ ಬದುಕು ಮತ್ತು ಬರಹ, ಕವಿಯ ಒಟ್ಟು ಸಾಹಿತ್ಯದ ಸಂಕ್ಷಿಪ್ತ ಪರಿಚಯವಿದೆ. ಮೂರನೆಯ ಅಧ್ಯಾಯದಲ್ಲಿ ಭಾರತೀಯ ಮತ್ತು ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಒಂದು ಪಕ್ಷಿ ನೋಟವಿದೆ. ನಾಲ್ಕನೇಯ ಅಧ್ಯಾಯದಲ್ಲಿ ಮಲ್ಲಿಗೆಯ ಮಾಲೆ ಕವನ ಸಂಕಲನದಲ್ಲಿನ ಭಾಷೆ, ಶೈಲಿ, ವಸ್ತು ಮತ್ತು ಉದ್ದೇಶದ ಪರಿಚಯವಿದೆ. ಐದನೇಯ ಅಧ್ಯಾಯದಲ್ಲಿ ಕೆ.ಎಸ್.ನವರ ಸಮಗ್ರ ಕಾವ್ಯದಲ್ಲಿ ಸ್ತ್ರೀ ಸಂವೇದನೆಯ ಪರಿಕಲ್ಪನೆಯ ಪರಿಚಯವಿದೆ. ನಂತರ ಉಪಸಂಹಾರದ ಬಗ್ಗೆ ಹೇಳಲಾಗಿದೆ ಅಂತಿಮವಾಗಿ ಪ್ರಬಂಧಕ್ಕೆ ಬಳಸಲಾದ ಸಹಾಯಕ ಗ್ರಂಥಗಳು, ಆಕರ ಗ್ರಂಥಗಳ ಪರಿಚಯ ಮಾಡಿ ಕೊಡಲಾಗಿದೆ.

ಈ ಸಂಪ್ರಬಂಧದಲ್ಲಿ ಸಮಗ್ರ ಕವನ ಸಂಕಲನವಾದ ಮಲ್ಲಿಗೆಯಮಾಲೆಯನ್ನು ಆಯ್ದುಕೊಂಡು ಆ ಕವಿತೆಗಳಲ್ಲಿರುವ ಸ್ತ್ರೀ ಕಲ್ಪನೆಯ ಬಗ್ಗೆ ಮಾತ್ರ ಹೇಳಲು ಇಚ್ಚಿಸುತ್ತೇನೆ.

## ಅಧ್ಯಾಯ-2

## ಕೆ.ಎಸ್.ನ ರವರ ಬದುಕು ಮತ್ತು ಬರಹ. ಕವಿಯ ಒಟ್ಟು ಸಾಹಿತ್ಯದ ಸಂಕ್ಷಿಪ್ತ ಪರಿಚಯ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅದರಲ್ಲೂ ಮುಖ್ಯವಾಗಿ ಕಾವ್ಯ ಪ್ರಕಾರ ಕ್ಷೇತ್ರದಲ್ಲಿ ಕೆ.ಎಸ್.ನ ರವರು ವಿಶಿಷ್ಟ ಕೊಡುಗೆ ನೀಡಿದ್ದಾರೆ. ಬಿ.ಎಂ.ಶ್ರೀ ಯವರಿಂದ ಆರಂಭವಾದ ಆಧುನಿಕ ಕನ್ನಡ ಸಾಹಿತ್ಯ ಪರಂಪರೆಯ ಘೋಷಣೆ ಇಂಗ್ಲೀಷ್ ಗೀತಗಳು ಮೂಲಕ ಸಾಗಿ ಬಂದಿದೆ. ಗೋವಿಂದ ಪೈ, ಮಾಸ್ತಿ, ಡಿ.ವಿ.ಜಿ., ದ.ರಾ.ಬೇಂದ್ರೆ, ಕುವೆಂಪು, ತೀ.ನಂ.ಶ್ರೀ ಮೊದಲಾದ ಕವಿಗಳು ಹೊಸ ಪ್ರಯೋಗಗಳ ಹರಿಕಾರರಾಗಿ ಹೊಸತನಕ್ಕಾಗಿ ಹಂಬಲಿಸಿದವರು.

ನವೋದಯ ಕವಿಗಳು ವ್ಯಷ್ಠಿ, ಸಮಷ್ಠಿ, ಸಮನ್ವಯದ ಧ್ವನಿಯಲ್ಲಿ ಕಾವ್ಯ ಕಟ್ಟುವ ಮೂಲಕ ಸೃಜನಶೀಲತೆಯನ್ನು ದುಡಿಸಿಕೊಳ್ಳುವ ಕೆಲಸ ಮಾಡಿದರು. ಕ್ರಿಯಾಶೀಲತೆಯ ಜೀವಂತವಾದ ಸ್ವತಂತ್ರ ಭಾಷೆ ಎಂದಿಗೂ ಆಲೋಚಿಸುತ್ತದೆ. ಹೀಗೆ ಹೊಸದಾದ ನವಿರಾದ ಕಂಪನ್ನು ಕನ್ನಡದಲ್ಲಿ ಸೂಸಿದ ಮಹತ್ವದ ಕವಿಗಳಲ್ಲಿ ಕೆ.ಎಸ್.ನ ರವರು ಒಬ್ಬರು. ಇವರು ಕನ್ನಡ ಕಾವ್ಯದ ವರ್ಣಮಯ ಪ್ರಪಂಚಕ್ಕೆ ತಮ್ಮದೇ ಆದ ವಿಶಿಷ್ಟ ನಾದ, ಧ್ವನಿಯನ್ನು ನೀಡಿದವರು. ಪುನರುಜ್ಜೀವನ ಅಥವಾ ನವೋದಯ ಕಾಲದಲ್ಲಿ ತಮ್ಮ ಕಾವ್ಯ ರಚನೆ ಆರಂಭಿಸಿದರು. ನಂತರ ಪ್ರಗತಿಶೀಲ, ನವ್ಯದ ಪ್ರಭಾವಕ್ಕೆ ಒಳಗಾಗಿ ಸ್ವಲ್ಪ ದೂರ ಸಾಗಿದರು. ಆದರೆ ಮರಳಿ ತಮ್ಮ ಕಾವ್ಯ ಪ್ರಕಾರಕ್ಕೆ ಬಂದುದು ಅವಿಸ್ಮರಣೀಯ.

ಕೆ.ಎಸ್.ನ ರವರು ವಸ್ತು, ದೃಷ್ಠಿ, ಅಭಿವ್ಯಕ್ತಿ ಎಲ್ಲದರಲ್ಲು ನವೋದಯ ಕವಿಯಾಗಿಯೇ ನಡೆದಿದ್ದಾರೆ. ದಲಿತ ಬಂಡಾಯದ ಕಾಲದಲ್ಲೂ ಅವರ ಕಾವ್ಯ ಸಂಕಲನಗಳು ಪ್ರಕಟವಾಗಿವೆ. ಇವರು ವ್ಯವಸ್ಥೆಗೆ ಎಷ್ಟು ಪರ ವಿರೋಧವಿರಬೇಕು ಎಂಬುದನ್ನು ಮಾತ್ರ ಮಂಡಿಸಿದ್ದಾರೆ. ಸಜ್ಜನರು ಸುಸಂಸ್ಕೃತರು ಆದ ಕವಿ ಸಂಸ್ಕೃತಿಯೊಂದರ ಅಭಿವ್ಯಕ್ತಿಯಾಗಿ ಕಾವ್ಯದುದ್ದಕ್ಕೂ ಕಾಣಿಸಿಕೊಳ್ಳುತ್ತಾರೆ. ಪ್ರಗತಿಶೀಲರು ನವೋದಯದ ಮೇಲೆ ದಾಳಿ ಮಾಡಿದಾಗ ನವೋದಯವನ್ನೇ ಬಲವಾಗಿ ಸಮರ್ಥಿಸಿದರು ಸಮಾಜದ ಅನೇಕ ಸಮಸ್ಯೆಗಳನ್ನು ಕುರಿತು ಕಾವ್ಯ ರಚಿಸಿದರು. ಬರೆಯುತ್ತಾ ಹೋದಂತೆ ಬಂದ ಹೊಸತನೆಲ್ಲಾ ತನ್ನದಾಗಿಸಿಕೊಳ್ಳಬೇಕೆಂಬ ಹಂಬಲದಿಂದ ಮಾತ್ರ ಕವಿ ಪ್ರತಿಕ್ರಿಯಿಸಿ ನವ್ಯ ಸಾಹಿತ್ಯ ರಚಿಸಿದ್ದಾರೆ.

ಕೆ.ಎಸ್.ನ ರವರ ಕಾವ್ಯ ವಸ್ತುವಿಗಿಂತ ರೂಪದಲ್ಲಿ ಹೆಚ್ಚು ಹೋಲುತ್ತದೆ. ನವ್ಯದ ವಸ್ತು ಮತ್ತು ಅಭಿವ್ಯಕ್ತಿ ನಡುವಣ ಕೇಂದ್ರೀಕೃತವಿಲ್ಲ. ರೂಪಕ, ಉಪಮೆ, ಪ್ರತಿಮೆಗಳು ಹೊಸ ರೀತಿಯಲ್ಲಿದ್ದು ಇವರಲ್ಲಿ ಅಭಿವ್ಯಕ್ತಿ ದ್ರವ್ಯವಾಗಿ ಕೆಲಸ ಮಾಡಿವೆ. ಇವರ ಕಾವ್ಯದಲ್ಲಿ ಸಾಂಪ್ರದಾಯಿಕ ನವ್ಯತೆ, ಹತಾಶೆ ಅನ್ವೇಶಣೆಗಳಿವೆ. ಕವಿಯ ಕಾವ್ಯಗಳಲ್ಲಿ ಆಕ್ರೋಶಗಳು ಸ್ಫೋಟಗೊಳ್ಳುವುದಿಲ್ಲ. ಏಕಾಂಗಿತನ, ಅನಾಥ ಭಾವನೆಗಳು ಪ್ರಬಲವಾಗಿ ಕಾಡುವುದಿಲ್ಲ. ಅವರ ಜಾಯಮಾನದ ಬರಹ ಅದಕ್ಕೆ ಒಪ್ಪುವುದಿಲ್ಲ. ಆದ್ದರಿಂದ ಇವರನ್ನು ಆಕಸ್ಮಿಕ ನವಯ ಕವಿ ಎನ್ನಬಹುದು.

ಕೆ.ಎಸ್.ನ ರವರ ಕವಿತೆಗಳು ಭಾವ ಪರಿಷ್ಕಾರತೆಯ ಮುದ ತಂದುಕೊಡುತ್ತವೆ. ಆನಂದದ ಪ್ರಕ್ರಿಯಲ್ಲಿ ಬೆಳಕು ಚೆಲ್ಲುವ ಕ್ರಿಯೆಯು ಆರಂಭವಾಗುತ್ತದೆ. ಇವರ ಕಾವ್ಯ ಒಮ್ಮೆಲೆ ಭಾವದೀಪ್ತತೆಯನ್ನು ವಿಚಾರ ಜಾಗೃತಿಯನ್ನು ಉಂಟು ಮಾಡುವುದು. ಬದಲಾದ ಜೀವನವನ್ನು ಪ್ರತ್ಯಕ್ಷೀಕರಿಸಿಕೊಳ್ಳುತ್ತಾ ಸಾಗುವುದು ಇವರ ಕಾವ್ಯದ ಜಾಯಮಾನ. ಕಾವ್ಯ ಮಾರ್ಗಗಳ ತಾಕಲಾಟವಿಲ್ಲದೆ ಬರೆದ ಕವನಗಳೇ ಅವರ ಸಹಜ ಸೃಜನಶೀಲತೆಗೆ ನಿದರ್ಶನಗಳು.

## ಕವಿಯ ಜನನ ಮತ್ತು ಬಾಲ್ಯ

ಕೆ.ಎಸ್.ನ ರವರು ಹುಟ್ಟಿದ್ದು 1915 ಜನವರಿ 26 ರಂದು ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಕಿಕ್ಕೇರಿಯಲ್ಲಿ. ತಂದೆ ಸುಬ್ಬರಾಯರು ತಾಯಿ ನಾಗಮ್ಮ. ಕವಿ ಹುಟ್ಟಿದ ಊರಿನಲ್ಲಿ ಬಹಳಕಾಲ ವಾಸ ಮಾಡಲು ಸಾಧ್ಯವಾಗದೆ ಮನೆ ಮಾರಿ ಸುಬ್ಬರಾಯರು ಮೈಸೂರಿಗೆ ಬಂದು ನೆಲೆಸಿದರು. ಕೆ.ಎಸ್.ನ ರವರ ಬಾಲ್ಯ, ವಿಧ್ಯಾಭ್ಯಾಸ ಮೈಸೂರಿನಲ್ಲಿ ಆಯಿತು. ಚಿಕ್ಕಂದಿನಿಂದಲೇ ಕವಿ ನಗರದ ಪರಿಸರಕ್ಕೇ ಹೊಂದಿಕೊಂಡು ಬೆಳೆದರು. ಮಹರಾಜ ಹೈಸ್ಕೂಲಿಗೆ ಸೇರಿದರು. ಮಗ ಇಂಜಿನಿಯರಿಂಗ್ ಮಾಡಲೆಂದು ತಂದೆ ಬಯಸಿದ್ದರು ಆದರೆ ಕೆ.ಎಸ್.ನ ರವರ ಒಲವು ಕಲಾ ವಿಷವಾಗಿತ್ತು ಆದ್ದರಿಂದ ಬಿ.ಎ.ಓದಲು ನಿರ್ಧರಿಸಿದರು ನಂತರ ಬಿ.ಎಂ.ಶ್ರೀ ಯವರ ಬೆಂಬಲದಿಂದ ಬೆಂಗಳುರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ವ್ಯಾಸಂಗಕ್ಕೆ ಸೇರಿದರು. ಅಲ್ಲಿ ಭೌತಶಾಸ್ತ್ರ, ಗಣಿತಶಾಸ್ತ್ರ ಹಾಗೂ ಇಂಗ್ಲೀಷ್ ವಿಷಯ ತೆಗೆದುಕೊಳ್ಳುತ್ತಾರೆ. ಕೆ.ಎಸ್.ನ ರವರು ವಾರಾನ್ನದ ಶಿಷ್ಯನಾಗಿ ಓದನ್ನು ಸಾಗಿಸಿದರು. ಬಡತನದ ನಡುವೆಯೇ ತಮ್ಮ ವಿಧ್ಯಾಭ್ಯಾಸವನ್ನು ಅತ್ಯಂತ ಶ್ರದ್ಧೇ ಹಾಗು ಆಸಕ್ತಿಗಳಿಂದ ಮುಂದುವರೆಸಿದ್ದರು. ಊಟ, ವಸತಿಯ ಸಮಸ್ಯೆ ಎಂದಿಗೂ ಅವರ ವಿಧ್ಯಾಭ್ಯಾಸಕ್ಕೆ ಭಂಗ ತರಲಿಲ್ಲ.

ಮುಂದೆ ಕೆ.ಎಸ್.ನ ರವರು ಮನೆಯ ಕಷ್ಟಗಳ ಕಾರಣದಿಂದ ಬಿ.ಎ.ಮುಗಿಸದೆ ಓದು ನಿಲ್ಲಿಸಿದುದು ವಿಷಾದದ ವಿಷಯ. ತಂದೆ ಖಾಯಿಲೆ ಬಂದು ತೀರಿಕೊಂಡರು. ಹಿರಿಯ ಮಗನಾದ ಕೆ.ಎಸ್.ನ. ರವರ ಹೆಗಲಮೇಲೆ ಸಂಸಾರದ ಹೊಣೆ ಬಿತ್ತು. ಅಂಗಡಿಯಲ್ಲಿ ಕೆಲಸಕ್ಕೆ ಸೇರಿದರು. ತಿಂಗಳಿಗೆ 24 ರೂ. ಸಂಬಳವಿತ್ತು. ನಂತರ ಸರ್ಕಾರಿ ನೌಕರಿ ಲಭಿಸಿ ಸಂಸಾರದ ನಿರ್ವಹಣೆಗೆ ಶಾಶ್ವತ ದಾರಿ ಲಭಿಸಿತ್ತು. ಕೆ.ಎಸ್.ನ ರವರು 1936 ರಲ್ಲಿ ತಿಪಟೂರಿನ ಶಿರಸ್ತೇದಾರರ ಮಗಳು ವೆಂಕಮ್ಮನವರನ್ನು ಸಾಂಪ್ರದಾಯಿಕ ರೀತಿಯಲ್ಲಿ ಮದುವೆಯಾದರು. ಇಬ್ಬರದು ಅನ್ಯೋನ್ಯ ದಾಂಪತ್ಯ. ಅವರಿಗೆ ನಾಲ್ಕು ಗಂಡು, ನಾಲ್ಕು ಹೆಣ್ಣು ಮಕ್ಕಳು.

ಕೆ.ಎಸ್.ನ ರವರು ಆರಂಭದಲ್ಲಿ ಹೋರಾಟದ ಬದುಕು ನಡೆಸಿದ್ದರು. ಬಡತನ, ವಿಧ್ಯಾಭ್ಯಾಸ ಕುಂಟಿತ, ತಂದೆ ಸಾವು ಮುಂದೆ ಸರ್ಕಾರಿ ನೌಕರಿ. ಆದರೆ ತಮ್ಮ ಸ್ವತಂತ್ರವಾದ ಅಧ್ಯಯನ ಮತ್ತು ಕಾವ್ಯ ರಚನಾ ಸಾಮರ್ತ್ಯದಿಂದ ಅದನ್ನೆಲ್ಲಾ ಅವರು ವಿಶಿಷ್ಟ ರೀತಿಯಲ್ಲಿ ತುಂಬಿಕೊಂಡರು. ಮೊದಲಿಂದಲೂ ಕನ್ನಡ ಆಸಕ್ತಿಯ ವಿಷಯವಾಗಿತ್ತು. ಓದಿನ ವಿಷಯವನ್ನು ಬಿಟ್ಟು ಕನ್ನಡದ ತರಗತಿಯಲ್ಲಿ ಕುಳಿತಿರುತ್ತಿದ್ದರಂತೆ. ಅವರು ಕನ್ನಡದ ಸುಪ್ರಸಿದ್ಧ ಕವಿಯಾಗಿ ರೂಪುಗೊಳ್ಳಲು ಈ ಪದವಿ, ಇಚ್ಛಿತ ಅಧ್ಯಯನ ವಿಷಯಗಳಾವುವು ಅಡ್ಡಿ ಬರಲಿಲ್ಲ. ಕೆ.ಎಸ್.ನ ರವರು ಬೆಂಗಳೂರಿಗೆ ಪಯಣಿಸಿ ವಿಶ್ವ ಕರ್ನಾಟಕ ಪತ್ರಿಕೆಯ ಉಪಸಂಪಾದಕತ್ವ ಪಡೆದರು. ಮೈಸೂರಿನಲ್ಲಿ ಖಾಯಂ ಕೆಲಸ ಪಡೆದು ನಂತರ ಬೆಂಗಳೂರಿಗೆ ವರ್ಗಾವಣೆಗೊಂಡು ಹೊಸ ಮನೆ ನಿರ್ಮಿಸಿಕೊಂಡರು.

ಕೆ.ಎಸ್.ನ ರವರ ಮನೆಯಲ್ಲಿ ಮೊದಲಿನಿಂದಲೂ ಒಂದು ರೀತಿಯ ಸಾಂಸ್ಕೃತಿಕ ವಾತಾವರಣವಿತ್ತು. ತಂದೆ ಸುಬ್ಬರಾಯರು ವಯೋಲಿನ್ ನುಡಿಸುತ್ತಿದ್ದರಂತೆ. ಆಗಿನ ಪ್ರಸಿದ್ಧ ಸಂಗೀತ ವಿದ್ವಾಂಸರೆಲ್ಲಾ ಇವರ ಮನೆಗೆ ಬರುತ್ತಿದ್ದರಂತೆ. ತಂದೆಗೆ ಮಗ ತನ್ನಂತೆ ಪಿಟೀಲು ನುಡಿಸಬೇಕೆಂಬ ಆಸೆ. ಆದರೆ ಮಗನಿಗೆ ಸಾಹಿತ್ಯದ ಬಗ್ಗೆ ಒಲವು. ಕವಿಯ ಈ ಸಹಜ ಆಸಕ್ತಿಯನ್ನು ತಂದೆ ಕಿತ್ತುಕೊಳ್ಳದಿದ್ದುದು ಕನ್ನಡದ ಪುಣ್ಯ.

## ಕೆ.ಎಸ್.ನ ರವರ ಕಾವ್ಯ ರಚನೆಯ ಆರಂಭ

ಕೆ.ಎಸ್.ನ ರವರು ಹೈಸ್ಕೂಲಿನಲ್ಲಿದ್ದಾಗಲೇ ಕವನ ಕಟ್ಟುವ ಆಸಕ್ತಿ ಹೊಂದಿದ್ದರು. ಇವರು ಮೊದಲು ಕವಿತೆ ಬರೆದದ್ದು ಇಂಗ್ಲೀಷ್ನಲ್ಲಿ. ಬೇಸಿಗೆಯ ರಜೆಯಲ್ಲಿ ಒಬ್ಬರು ಬರ್ನ್ಸ್ ಕವಿಯ ಕವನ ಸಂಗ್ರಹವನ್ನು ಕೊಟ್ಟಿದ್ದರಂತೆ ಅದನ್ನು ಓದುತ್ತಲೇ ಒಂದು ಕವನ ರಚಿಸಿದ್ದರು. 1932 ರಲ್ಲಿ ಮೊದಲಿಗೆ ಶಿಕ್ಷಕರ, ಗೆಳೆಯರ ಮುಂದೆ ಅದನ್ನು ಓದಿದ್ದರು ಆಗ ಅವರೆಲ್ಲಾ ಇವರನ್ನು ಕವಿ ಎಂದು ಕರೆದರು ಮುಂದೆ ಕನ್ನಡದಲ್ಲಿ ಬರೆಯಲು ಇಂಗ್ಲೀಷ್ ಗೀತೆಗಳಿಂದ ಪ್ರೇರಣೆ ಪಡೆದರು. ತಾವು ನಿಂತ ನೆಲ ಮತ್ತು ನೋಡಿದ ಸುತ್ತಮುತ್ತಲ ಪರಿಸರಗಳೇ ಇವರ ಕಾವ್ಯ ರಚನೆಗೆ ಕಾರಣವಾದವು.

ಪುಷ್ಪಕವಿ ಎಂ.ಗೋಪಾಲಕೃಷ್ಣ ಅಡಿಗರು ಮೊದಲಿಗೆ ಕೆ.ಎಸ್.ನ ರವರ ಭಾವಗೀತೆಗೆ ಮುನ್ನುಡಿ ಬರೆದವರು. ಕೆ.ಎಸ್.ನ ರವರು ಕಾವ್ಯ ಕ್ಷೇತ್ರಕ್ಕೆ ಕಾಲಿಡಲು ಅಡಿಗರ ಮಾರ್ಗದರ್ಶನವೇ ದಾರಿದೀಪವಾಯಿತು. ಕೆ.ಎಸ್.ನ ರವರು ಬರೆದ ಮೊದಲ ಕನ್ನಡ ಕವಿತೆ ಕಬ್ಬಿಗನ ಕೂಗು. ಇದು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಯಿತು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಶ್ರೀ ಕುವೆಂಪು ರವರು ಕನ್ನಡ ಅಧ್ಯಾಪಕರಾಗಿದ್ದಾಗ ಕವನಗಳನ್ನು ಅವರಿಗೆ ತೋರಿಸುವಂತೆ ಎ.ಆರ್.ಕೃಷ್ಣರಾಯರು ಕೆ.ಎಸ್.ನ ರವರಿಗೆ ತಿಳಿಸಿದ್ದರಂತೆ.

ಕೆ.ಎಸ್.ನ ರವರ ಸಾಹಿತ್ಯ ಪ್ರವೇಶಕ್ಕೆ ಕುವೆಂಪು, ಟಿ.ಎಸ್.ವೆಂಕಣ್ಣಯ್ಯರವರ ಪ್ರೋತ್ಸಾಹ ಅಪಾರವಾಗಿತ್ತು " ಅವರು ನೀಡಿದ ಪ್ರೋತ್ಸಾಹವೇ ನನ್ನ ಕವಿತೆಯ ತಳಹದಿ. ನನ್ನ ಹಾದಿಯಲ್ಲಿ ನನ್ನ ಹೆಜ್ಜೆ ದೃಢವಾಯಿತು " ಎಂದಿದ್ದಾರೆ. ಕಾವ್ಯ ಮಾರ್ಗದಲ್ಲಿ ತಮ್ಮ ಹಾದಿಯನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಲು ನೆರವಾದ ಶ್ರೀಮಾನ್ಯರವರು.

ಕೆ.ಎಸ್.ನ ರವರು ಒಲುಮೆಯ ಕವಿ, ಪ್ರೇಮಕವಿ ಎನಿಸಿದ್ದಾರೆ. ಆದಕ್ಕೆ ಒಲುಮೆ ಎಂಬ ಪ್ರೇಮ ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಕವಿಯ ವ್ಯಕ್ತಿತ್ವ ಮತ್ತು ಕಾವ್ಯ ಜೀವನದ ಪೋಷಣೆಗೆ ತೀ.ನಂ.ಶ್ರೀ, ವಿ.ಸೀತಾರಾಮಯ್ಯ ಕಾರಣಕರ್ತರು. ಗುರು ಸಮಾನರಂತಿದ್ದ ಇವರಿಂದ ಕವನಗಳನ್ನು ಓದಿಸಿ ಸಲಹೆ ಕೊಡುತ್ತಿದ್ದರು. ಸಂಸ್ಕೃತ, ಹಳಗನ್ನಡ, ಹೊಸಗನ್ನಡ, ಇಂಗ್ಲೀಷ್ ಹೀಗೆ ಎಲ್ಲಾ ಸಾಹಿತ್ಯದ ಪರಿಚಯವನ್ನು ಮಾಡಿಸಿದರು ಎಂದಿದ್ದಾರೆ.

## ಕವಿ ಕೆ.ಎಸ್.ನ ರವರ ವೈವಿಧ್ಯಪೂರ್ಣ ಬರಹದ ಪರಿಚಯ

ಕೆ.ಎಸ್.ನ ರವರು ಕಾವ್ಯ ಪ್ರಕಾರಕ್ಕೆ ತಮ್ಮನ್ನು ಪೂರ್ಣವಾಗಿ ಅರ್ಪಿಸಿಕೊಂಡವರು. ಆದರೂ ಉಳಿದ ಪ್ರಕಾರಗಳಲ್ಲಿಯೂ ಅಲ್ಪ-ಸ್ವಲ್ಪ ಕೆಲಸ ಮಾಡಿದ್ದಾರೆ. ಮುಖ್ಯವಾಗಿ ಕಥೆ ವಿಮರ್ಶೆ ಅನುವಾದಕ್ಕೆ ಸಂಬಂಧಿಸಿದಂತೆ ಗದ್ಯ, ಭಾಷಾಂತರ ಕೃತಿಗಳನ್ನು ರಚಿಸಿ ಸಾಕಷ್ಟು ವೈವಿಧ್ಯಪೂರ್ಣವಾಗಿ ಪ್ರಕಟಿಸಿದ್ದಾರೆ. ಹೊಸ ವಸ್ತು, ಹೊಸ ಅಭಿವ್ಯಕ್ತಿಗಾಗಿ ಪ್ರಾಮಾಣಿಕ ತುಡಿತವೊಂದನ್ನು ನಾವಿಲ್ಲಿ ಕಾಣುತ್ತೇವೆ. ಐರಾವತ, ದೀಪದ ಮಲ್ಲಿ, ಉಂಗುರ, ಇರುವಂತಿಗೆ, ಶಿಲಾಲತೆ ಹೀಗೆ ಹತ್ತಾರು ಕಾವ್ಯ ಸಂಕಲನಗಲೇ ಉತ್ತಮ ಉದಾಹರಣೆಗಳಾಗಿವೆ. ಇವರ ಕಾವ್ಯಗಳು ಸಣ್ಣ ಸಣ್ಣ ತಿರುವುಗಳಿಂದ ದೊಡ್ಡ ತಿರುವುಗಳಿಗೆ, ಸರಳತೆಯಿಂದ ಸಂಕೀರ್ಣತೆಗೆ ಹೊರಳಿರುವುದನ್ನು ಗಮನಿಸಬಹುದು. ಹೊಸಗನ್ನಡ ಕಾವ್ಯಮಾರ್ಗಕ್ಕೆ ಹೊಸದಾದ ಮತ್ತು ಸೌಂದರ್ಯವನ್ನು ತಂದು ಕೊಡಲು ಇದು ಕಾರಣವಾಯಿತು. ಇದರಿಂದ ಅಪಾರ ಜನ ಮನ್ನಣೆಗಳಿಸಿದರು.

## ಕೆ.ಎಸ್.ನ ರವರ ಒಟ್ಟು ಸಾಹಿತ್ಯದ ನೋಟ

### 1) ಕವನ ಸಂಕಲನಗಳು:

[1] 1942- ಮೈಸೂರು ಮಲ್ಲಿಗೆ

[2] 1945- ಐರಾವತ

[3] 1947- ದೀಪದಮಲ್ಲಿ

[4] 1949- ಉಂಗುರ

[5] 1952- ಇರುವಂತಿಗೆ

[6] 1958- ಶಿಲಾಲತೆ

[7] 1960- ಮನೆಯಿಂದ ಮನೆಗೆ

[8] 1976- ತೆರೆದ ಬಾಗಿಲು

[9] 1983- ನವಪಲ್ಲವ

[10] 1986- ಮಲ್ಲಿಗೆಯ ಮಾಲೆ

[11] 1993- ದುಂಡುಮಲ್ಲಿಗೆ

[12] 1999-ನವಿಲಧನಿ

[13] 2000- ಸಂಜೆಹಾಡು

[14] 2001-ಕೈಮರದ ನೆಳಲಲ್ಲಿ

### 2) ಗದ್ಯ ಕೃತಿಗಳು

[1] 1942- ಮಾರಿಯ ಕಲ್ಲು

[2] 1958- ಉಪವನ

[3] 1960- ದಮಯಂತಿ

### 3) ಭಾಷಾಂತರ

[1] 1956- ಮೋಹನ ಮಾಲೆ (ಗಾಂಧೀಜಿ ಸುಭಾಷಿತಗಳು)

[2] 1961- ನನ್ನ ಕನಸಿನ ಭಾರತ (ಗಾಂಧೀಜಿ ಕೃತಿಗಳಿಂದ)

[3] 1965- ಪ್ರಪಂಚ ಬಾಲ್ಯದಲ್ಲಿ- ವೆರಿಯರ್ ಎಲ್ವಿನ್

[4] 1966- ಮೀಡಿಯಾ- ಯುರಿಪಿಡೀಸ್

[5] 1969- ಹಕಲಬರಿ ಫಿನ್ನನ ಸಾಹಸಗಳು- ಮಾರ್ಕ್ ಟ್ವೇಯ್ನ್

[6] 1971- ಸುಬ್ರಮಣ್ಯ ಭಾರತಿ- ಪ್ರೇಮ ನಂದಕುಮಾರ್ ಮತ್ತು ಪುಷ್ಕಿನ್ನನ ಕವಿತೆಗಳು

[7] 1972- ಮಾಯಾಶಂಖ ಮತ್ತು ಇತರ ಕಥೆಗಳು-ಜಾನ್ ದೊರೈರಾಜ್

[8] 1972- ರಾಣಿಯಗಿಳಿ ರಾಜನ ಮಂಗ- ಹರೀಂದ್ರನಾಥ ಚಟ್ಟೋಪಧ್ಯಾಯ

[9] 1979- ತ್ಯಾರ್ ಸುಲ್ತಾನನ ಕಥೆ- ಅಲೆಗ್ಸಾಂಡರ್ ಪುಷ್ಕಿನ್

[10] 1997- ರಾಬರ್ಟ್ ಕವಿಯ ಕೆಲವು ಪ್ರೇಮ ಗೀತೆಗಳು

[11] 1997- ಕೆಲವು ಚೀನಿ ಕವನಗಳು

## ಕೆ.ಎಸ್.ನ.ರವರ ಸಾಹಿತ್ಯ ಕ್ಷೇತ್ರದ ಕೊಡುಗೆಗೆ ಸಂದ ಪ್ರಶಸ್ತಿಗಳು

[1] ಮೈಸೂರು ಮಲ್ಲಿಗೆ - ದೇವರಾಜ್ ಬಹದ್ದೂರ್ ಬಹುಮಾನ

[2] ಶೀಲಾಲತೆ - ಮೈಸೂರು ರಾಜ್ಯ ಸಂಸ್ಕೃತಿ ಪ್ರಸಾರ ಇಲಾಖೆಯ ಬಹುಮಾನ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ಗೌರವ ಫೆಲೋಷಿಪ್, ಅ.ಭಾ.ಕ.ಸಾ. ಸಮ್ಮೇಳನದ ಅಧ್ಯಕ್ಷತೆ ಮತ್ತು ಬೆಂಗಳೂರು ವಿ.ವಿ.ಯ ಗೌರವ ಡಿ.ಲಿಟ್ ಪದವಿಗಳು, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮಾಸ್ತಿ, ಗೊರೂರು, ಪಂಪ ಸಾಹಿತ್ಯ ಪ್ರಶಸ್ತಿಗಳು ಲಭಿಸಿವೆ. ಕವಿ 03-12-2003 ರಂದು ನಿಧನರಾಗಿದ್ದಾರೆ.

ಒಟ್ಟಾರೆ ಕೆ.ಎಸ್.ನ ರವರದ್ದು ತುಂಬು ಜೀವನ, ಗಂಭೀರ ಚಿಂತನೆ, ಲಲಿತ ಸಾಹಿತ್ಯ, ಸುಲಲಿತ ಕಾವ್ಯ ಲಹರಿಯಾಗಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕೆ.ಎಸ್.ನ ರವರು ಉತ್ತಮ ಲೇಖಕ ಕವಿಯಾಗಿ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ಕಾವ್ಯ ಸೃಷ್ಟಿ ಗಂಗೆಯ ಹೊಳೆಯನ್ನೇ ತಮ್ಮ ವಿಶಿಷ್ಠ ಲೇಖನಿಯಿಂದ ಹರಿಸಿ ಕನ್ನಡ ಗಂಗೆಯ ಬಸಿರು ತುಂಬಿಸಿದ್ದಾರೆ. ಇವರ ಹೆಸರು ಕನ್ನಡ ಸಾರಸ್ವತ ಲೋಕದಲ್ಲಿ ಅವಿಸ್ಮರಣೀಯವಾಗಿದೆ.

## ಅಧ್ಯಾಯ-3

## ಭಾರತೀಯ ಮತ್ತು ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಒಂದು ಪಕ್ಷಿ ನೋಟ

ಸ್ತ್ರೀಪರ ಕಾಳಜಿಗಳು, ಸ್ತ್ರೀಪರ ಚಿಂತನೆಗಳು, ಸ್ತ್ರೀಯರ ಸಬಲೀಕರಣದ ಹಿನ್ನೆಲೆಯಲ್ಲಿ ಸ್ತ್ರೀ ಸಂವೇದನೆ ಇಂದು ಪ್ರಧಾನವಾದುದಾಗಿದೆ, ಸ್ತ್ರೀಪರ ನಿಲುವುಗಳು ಸ್ತ್ರೀ ಸಂವೇದನೆಗೆ ಕಾರಣಗಳಾಗಿವೆ. ಸ್ತ್ರೀಯರ ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ ನೆಲೆಗಳು ಸ್ತ್ರೀಯರ ಸ್ಥಿತಿಗೆ ಕಾರಣಗಳಾಗಿವೆ. ಪುರುಷಪ್ರಧಾನ ವ್ಯವಸ್ಥೆ, ಅದಕ್ಕೆ ಪೋಷಿತವಾದ ಪಟ್ಟಭದ್ರ ಹಿತಾಸಕ್ತಿ, ಇವುಗಳನ್ನು ಕಾಪಾಡುವ ಧರ್ಮ, ಸ್ತ್ರೀಯರನ್ನು ಪ್ರದೇಶದಿಂದ ಪ್ರದೇಶಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ, ಪರಿಸರದಿಂದ ಪರಿಸರಕ್ಕೆ, ಭಿನ್ನ ರೀತಿಯಲ್ಲಿ ಶೋಷಣೆಗೆ ಒಳಗು ಮಾಡಿದೆ. ಲಿಂಗಭೇದ ನೀತಿಯ ವಿರುದ್ಧ ಸ್ತ್ರೀ ಸಂವೇದನೆ ಸಮಾನತೆಯ ಹುಡುಕಾಟವನ್ನು ನಡೆಸುತ್ತಿದೆ. ಶ್ರೇಣೀಕೃತ ಸಮಾಜದ ಸಂರಚನೆಯಲ್ಲಿ ಮಹಿಳೆ ಎಲ್ಲಾ ಸ್ತರಗಳಲ್ಲೂ ಸೇರಿದ್ದಾಳೆ. ಭಾರತದ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಜಾಗತಿಕ ಸಮಾಜದಲ್ಲಿ, ಆಧುನಿಕ ಸಮಾಜದ ವ್ಯವಸ್ಥೆಯಲ್ಲಿ 'ಸರ್ವರಿಗೆ ಸಮಪಾಲು', 'ಸರ್ವರಿಗೆ ಸಮಬಾಳು' ಎಂಬ ಆಶಯದ ಹಿನ್ನೆಲೆಯಲ್ಲಿ ಸಂವೇದನೆಗಳು ರೂಪುಗೊಳ್ಳುತ್ತಿವೆ. ಹಾಗಾಗಿ ಸ್ತ್ರೀ ಕೆಲವು ಸಂದರ್ಭಗಳಲ್ಲಿ ಶೋಷಣೆಗೆ ಒಳಗಾಗಿದ್ದಾಳೆ ಎನ್ನಬಹುದು.

ನಮ್ಮ ಸಮಾಜದಲ್ಲಿ ಪಿತೃಪ್ರಧಾನ ಕುಟುಂಬಗಳೇ ಹೆಚ್ಚು ಇರುವುದರಿಂದ ಪಿತೃಪ್ರಧಾನ ಸಂಸ್ಕೃತಿಯಲ್ಲಿ ಪುರುಷನೇ ಮುಖ್ಯವಾಗುತ್ತಾನೆ ಮತ್ತು ಆತನ ಧ್ವನಿಯೇ ನಿರಂತರವಾಗಿರುತ್ತದೆ. ಈ ಕಾರಣದಿಂದ ಮಹಿಳಾ ವರ್ಗವನ್ನು ಮೂಕವಾಗಿಸಿದೆ. ಜಾತಿಯ ತಾರತಮ್ಯ ಹೇಗಿದೆಯೋ ಹಾಗೆಯೇ ಲಿಂಗ ತಾರತಮ್ಯವೂ ಇದೆ. ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಹಿಡಿತವನ್ನು ಸಾಧಿಸಿದ ಪುರುಷ ವರ್ಗದ ಮೌಲ್ಯಗಳೇ ಹೆಣ್ಣನ್ನು ಅರ್ಥೈಸಿದೆ. ಹಾಗಾಗಿ ಹೆಣ್ಣಿನ ಅಂತಃಸತ್ವ ಮತ್ತು ಅನನ್ಯತೆಗಳು ದಾಖಲಾಗದೆ ಹೋಗಿವೆ. ಈ ಲಿಂಗ ವ್ಯವಸ್ಥೆಯ ಮೇಲುತುದಿಯಲ್ಲಿ ಪುರುಷ ವರ್ಗ ತನ್ನ ಅನುಕೂಲಕ್ಕೆ ತಕ್ಕಂತೆ ಹೆಣ್ಣು ಗಂಡನ್ನು ನಿರ್ಮಿಸಿದೆ. "ಸ್ತ್ರೀಯು ಮೂಲತಃ ರೂಪಿಸಲ್ಪಟ್ಟವಳು, ಹೆಣ್ಣು ನಿರ್ದಿಷ್ಟ ಸಾಮಾಜಿಕ ಪ್ರಕ್ರಿಯೆಗಳಿಂದ ಆಗುತ್ತಾಳೆಯೇ ವಿನಃ ಹೆಣ್ಣಾಗಿಯೇ ಹುಟ್ಟುವುದಿಲ್ಲ" ಎಂದು ಸಿಮೋನ್ ದ ಬೋವಾ ಹೇಳಿದ್ದಾರೆ. ಯಾಕೆ ಎಂದರೆ ಹೆಣ್ಣು ಗಂಡು ಅಂದರೆ ಏನು? ಅವಳು ಹೇಗಿರಬೇಕು? ಅನ್ನುವುದನ್ನು ಪುರುಷ ಸಮಾಜವೇ ಹೇಳುತ್ತದೆ. ಲಿಂಗಾಧಾರಿತ ನೆಲೆಯಲ್ಲಿ ನಿರ್ಲಕ್ಷಿತವಾದ ಸ್ತ್ರೀಶಕ್ತಿಯ ಅನಾವರಣದ ಮೂಲಕ ಪುರುಷನ ಗ್ರಹಿಕೆಯ ಮಿತಿ ಮತ್ತು ಸುಳ್ಳುಗಳನ್ನು ತೆರೆದು ತೋರಬೇಕಾದ ಅಗತ್ಯ ಇದೆ.

### (ಅ) ಸ್ತ್ರೀ ಸಂವೇದನೆಗೆ ಕಾರಣಗಳು:

ಸ್ತ್ರೀ ಸಂವೇದನೆಗೆ ಹಲವಾರು ಕಾರಣಗಳನ್ನು ಗುರುತಿಸಬಹುದು. ಎಲ್ಲಾ ನಾಗರೀಕತೆಗಳಲ್ಲೂ ಹೆಣ್ಣನ್ನು ಹೀನಾಯವಾಗಿ ಅಥವಾ ಎರಡನೆಯ ದರ್ಜೆಯ ವ್ಯಕ್ತಿಯಾಗಿ ಕಾಣುತ್ತಾರೆ. ಹಾಗೆಯೇ ಪ್ರಪಂಚದ ಎಲ್ಲಾ ಜನಾಂಗಗಳಲ್ಲೂ ಹೆಣ್ಣಿನ ಶೋಷಣೆ ಸಾಮಾನ್ಯವಾದ ವಿಚಾರವಾಗಿದೆ. "ಜಗತ್ತನ್ನು ಗಂಡು ತನಗೆ ಬೇಕಾದಂತೆ ಸೃಷ್ಟಿಸಿದ್ದಾನೆ, ಅವನ ದೃಷ್ಟಿಕೋನಕ್ಕೆ ಅನುಗುಣವಾಗಿ ಜಗತ್ತಿನ ನಿಯಂತ್ರಣವನ್ನು ಮಾಡುತ್ತಾನೆ"[1] ಎಂದು

'ಸಿಮೋನ್ ದಿ ಬೋವಾ' ಹೇಳಿದ್ದಾರೆ. ಈ ರೀತಿಯ ಸ್ತ್ರೀವಾದಿ ಚಿಂತನೆಯ ಕ್ರಮಗಳು ಸ್ತ್ರೀಸಂವೇದನೆಗೆ ಕಾರಣವಾಗುತ್ತದೆ.

"ಸ್ತ್ರೀಯರು ಐತಿಹಾಸಿಕ ಪರಾಜಯದ" ನಂತರ ಮಾತೃಪ್ರಧಾನ ಸಂಸ್ಕೃತಿಯಿಂದ ಪಿತೃಪ್ರಧಾನ ಸಂಸ್ಕೃತಿಗೆ ಪರಿವರ್ತನೆಯಾದ ಕಾಲದ ನಂತರದಿಂದಲೂ ಸ್ತ್ರೀಯ ಶೋಷಣೆಯನ್ನು ಗಮನಿಸಬಹುದು.[2] ಸ್ತ್ರೀಯನ್ನು ಸಮಾಜದಲ್ಲಿ ಎರಡನೆಯ ದರ್ಜೆಯ ಪ್ರಜೆಯಾಗಿ ನೋಡುತ್ತಿರುವುದರಿಂದಲೇ ಸ್ತ್ರೀ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಈ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯುವುದು ಮುಖ್ಯವಾಗುತ್ತದೆ.

'ತಾಯಿಯ ಪ್ರೀತಿ ಕೇವಲ ಮನೆಯೊಳಗಿನ ವ್ಯವಹಾರ ಹಾಗಾಗಿ ಕುಟುಂಬದ ಸ್ವರೂಪವು ಬದಲಾಗಬೇಕು ಎಂದು ಒತ್ತಾಯ ಮಾಡುವುದನ್ನು ವಿರೋಧಿಸಿ ಸ್ತ್ರೀ ಗರ್ಭ ಧರಿಸುವುದು, ಬಿಡುವುದು ಅವಳ ಹಕ್ಕು ಎಂದು ವಾದಿಸುತ್ತಾರೆ. ಹೆಣ್ಣಿಗೆ ಕೇವಲ ಹೆರುವ ಕೆಲಸ ಅಷ್ಟೇ ಮೀಸಲಾಗಿರುವುದು. ಸ್ತ್ರೀವಾದಿ ವಿಮರ್ಶಕರು "ಮಹಿಳೆಯ ತಾಯ್ತನ ಕೇವಲ ಅವಳ ದೇಹ ಮತ್ತು ಮನಸ್ಸಿಗೆ ಮಾತ್ರ ಸಂಬಂಧಿಸಿದ್ದಲ್ಲ. ಅದು ಸಾಮಾಜಿಕ ಸ್ಥಿತಿಯ ಮೇಲೂ ಪ್ರಭಾವ ಬೀರುತ್ತದೆ. ಹಾಗಾಗಿ ತಾಯ್ತನ ಸ್ತ್ರೀಗೆ ವಿಶೇಷ ಅರ್ಹತೆ ಎಂದು ಪರಿಭಾವಿಸುತ್ತಾರೆ."[3] ಭಾಷೆಯನ್ನು ಸಾಮಾನ್ಯವಾಗಿ ಪುರುಷನಿಷ್ಟವೆಂದು ಭಾವಿಸಲಾಗಿದೆ. ಭಾಷೆಯ ಬಗ್ಗೆ ಮಾತನಾಡುತ್ತಾ 'ಗಂಡು ಭಾಷೆ' ಎಂಬ ಪರಿಭಾಷೆಯನ್ನು ಜಾರಿಗೆ ತರಲಾಗಿದೆ. ಹಾಗಾಗಿ ಭಾಷೆಯೂ ಸಹ ಸ್ತ್ರೀ ಸಂವೇದನೆಗೆ ಕಾರಣವಾಗುತ್ತದೆ. ಸ್ತ್ರೀಯರ ಮಾತಿನಲ್ಲಿ, ಬರಹಗಳಲ್ಲಿ ಮೆಲು ದನಿಯು ಹೊಮ್ಮುತ್ತಿದ್ದರೆ ಗಂಡಿನ ಮಾತಿನಲ್ಲಿ ಪುರುಷತ್ವವು ವ್ಯಕ್ತವಾಗುತ್ತದೆ.

ಕನ್ನಡ ಸಾಹಿತ್ಯದಲ್ಲಿ ಕೆಲವು ವಿಮರ್ಶಕರು ಮಹಿಳಾ ಲೇಖಕಿಯರ ಸಾಹಿತ್ಯವನ್ನು 'ಅಡುಗೆ ಮನೆ' ಸಾಹಿತ್ಯ ಎಂದು ಕರೆದಿದ್ದಾರೆ. ಸ್ತ್ರೀಯರು ರಚಿಸಿರುವ ಸಾಹಿತ್ಯವನ್ನು ಕೆಲವು ವಿಮರ್ಶಕರು ಆಕ್ಷೇಪಣೆ ಮಾಡಿದ್ದಾರೆ, ಅನುಮಾನದಿಂದಲೂ ನೋಡುತ್ತಿದ್ದಾರೆ. ಒಟ್ಟಾರೆ ಸ್ತ್ರೀಯನ್ನು, ಸ್ತ್ರೀಯರ ನಿಲುವುಗಳನ್ನು ಅಲಕ್ಷ್ಯದಿಂದ ಕೀಳಾಗಿ ನೋಡುತ್ತಿರುವುದನ್ನು ಕಾಣಬಹುದು.

**(ಆ) ಸ್ತ್ರೀ ಸಂವೇದನೆಯ ಪರಿಕಲ್ಪನೆ:**

'ಸ್ತ್ರೀ ಸಂವೇದನೆ' ಎಂದರೆ ಬರಿಯ ಸ್ತ್ರೀಯರ ಸಂವೇದನೆ ಎಂದು ಅರ್ಥವಲ್ಲ. ಒಬ್ಬ ಲೇಖಕಿಯು ಹೆಣ್ಣಾಗಿ ಅವಳ ಅನುಭವದಿಂದ ಬರೆದಾಗ ಮಾತ್ರ ಸ್ತ್ರೀ ಸಂವೇದನೆಯು ಪ್ರಕಟವಾಗುತ್ತದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ಸೆನ್ಸಿಬಿಲಿಟಿ' ಎಂಬ ಪದ 'ಸಂವೇದನೆ' ಎಂಬ ರೂಪದಲ್ಲಿ ಬಹಳ ಹಿಂದಿನಿಂದಲೂ ಬಳಕೆಯಾಗಿ ಬರುತ್ತಿದೆ. 'ಸಂವೇದನೆ' ಎಂದರೆ ಕನ್ನಡ ನಿಘಂಟಿನಲ್ಲಿ 'ಅನಿಸಿಕೆ', 'ಮನಸ್ಸಿಗೆ ತಟ್ಟುವಿಕೆ', 'ಗ್ರಹಿಕೆ', 'ಭಾವನೆ' ಎಂಬ ಅರ್ಥಗಳಿವೆ.

ಶತಶತಮಾನಗಳಿಂದ ಗಂಡು-ಹೆಣ್ಣು ಕೂಡಿ ಬದುಕಿದ್ದಾರೆ. ಹೆಣ್ಣಿಗೆ ತನ್ನದೇ ಆದ ಮಾನಸಿಕ, ಭೌತಿಕ, ಭಾವುಕ ಪ್ರಪಂಚವಿದೆ. ಈ ರೀತಿಯ ಮಹಿಳೆಯ ಗ್ರಹಿಕೆಯ ಸ್ವೀಕಾರದ ಲಯ, ಸ್ಪಂದನೆ ಎಲ್ಲವೂ ಭಿನ್ನವಾಗಿವೆ.

ಈ ವಿಶಿಷ್ಟವಾದ ಅನುಭವದ ಅಭಿವ್ಯಕ್ತಿಯನ್ನು ಸ್ತ್ರೀ ಸಂವೇದನೆ ಎಂದು ಕರೆಯಬಹುದು, ಸ್ತ್ರೀ ಸಂವೇದನೆಯ ಮೂಲ ಇತ್ತೀಚಿನದಾದರೂ ಸಂವೇದನೆ ಇತ್ತೀಚಿನದಲ್ಲ, ಸಂವೇದನೆಯ ಸ್ವರೂಪ ಕಾಲದಿಂದ ಕಾಲಕ್ಕೆ ಬೇರೆ ರೀತಿಯಾಗಿರಬಹುದು.

ಪುರುಷರಲ್ಲಿ ಸ್ತ್ರೀ ಸಂವೇದನೆಗಳು ಇರುವುದಿಲ್ಲ, ಸ್ತ್ರೀಯರಲ್ಲಿ ಮಾತ್ರ ಸ್ತ್ರೀ ಸಂವೇದನೆಗಳು ಇರುತ್ತವೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ, ಪುರುಷ ಲೇಖಕರು ತಮ್ಮ ಸಾಹಿತ್ಯದಲ್ಲಿ ಸ್ತ್ರೀಯರ ಸಂವೇದನೆಗಳನ್ನು ಉತ್ತಮವಾಗಿ ಚಿತ್ರಿಸಿರುವುದನ್ನು ನೋಡಬಹುದು. ಅದೇ ರೀತಿ ಎಲ್ಲಾ ಮಹಿಳಾ ಸಾಹಿತಿಗಳು ಸ್ತ್ರೀ ಸಂವೇದನೆಯ ದೃಷ್ಟಿಯಿಂದಲೇ ಬರೆಯುವುದಿಲ್ಲ. ಏಕೆಂದರೆ ಸ್ತ್ರೀಯ ಮೇಲೆ ವರ್ಗ, ಸಂಸ್ಕೃತಿ, ವರ್ಣ, ಧರ್ಮ ಇವೆಲ್ಲವೂ ಪ್ರಭಾವ ಬೀರುವುದರಿಂದ ಎಲ್ಲಾ ಮಹಿಳೆಯರಲ್ಲೂ ಹೆಣ್ಣುತನದ ವಿಶಿಷ್ಟ ಸಂವೇದನೆಗಳು ಇರುತ್ತವೆ ಎಂದು ಹೇಳಲು ಸಾಧ್ಯವಿಲ್ಲ. ಆದರೂ ಸ್ತ್ರೀ ಸಂವೇದನೆಯ ಬಗ್ಗೆ ಒಬ್ಬ ಸ್ತ್ರೀ ಬರೆಯುವುದಕ್ಕೂ ಒಬ್ಬ ಪುರುಷ ಬರೆಯುವುದಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ.

ಪುರುಷ ಸ್ತ್ರೀಯನ್ನು ಗೃಹಿಣಿ, ಜಗನ್ಮಾತೆ, ಪತಿವ್ರತೆ, ವೇಶ್ಯೆ ಎಂದು ಹೆಣ್ಣಿನ ಗುಣ ಸ್ವಭಾವಗಳನ್ನು ಚಿತ್ರಿಸಿದ್ದಾರೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಗಂಡು ಕೇಂದ್ರವಾಗಿ ನಿಂತು ನಾನು ಎಂದು ನಿರ್ವಚಿಸಿಕೊಂಡು ಹೆಣ್ಣನ್ನು ಕೀಳಾಗಿ ನೋಡಿದ್ದಾನೆ. ಮಗುವನ್ನು ಹೆರದ ಹೆಣ್ಣನ್ನು ಹೆಣ್ಣಲ್ಲವೆಂದು ಹೇಳುತ್ತಾರೆ. ಹೆಣ್ಣಿಗೆ ತನ್ನದಲ್ಲದ ಅನುಭವಕ್ಕೆ ಒಗ್ಗಿಕೊಳ್ಳುವಲ್ಲಿ ಅವಳಿಗೆ ಒತ್ತಡವಿದೆ.

ಗಂಡು–ಹೆಣ್ಣು ಇಬ್ಬರೂ ಒಂದೇ ಮನೆಯಲ್ಲಿ ಬೆಳೆದರೂ ಕೂಡ ಅವರಿಗೆ ಸಿಗುವ ಅನುಭವ, ಅವಕಾಶಗಳು, ಒತ್ತಾಸೆಗಳು ಭಿನ್ನವಾಗಿರುತ್ತವೆ. ಹೆಣ್ಣಿನ ಕನಸು, ಬಯಕೆಗಳೆಲ್ಲವೂ ಬೇರೆಯಾಗಿರುತ್ತವೆ. ಪುರುಷನ ಸಂವೇದನೆಗೂ ಹೆಣ್ಣಿನ ಸಂವೇದನೆಗೂ ಅಂತರವಿರುತ್ತದೆ. ಪುರುಷ ಎಲ್ಲವನ್ನೂ ತನ್ನ ಹಿಡಿತದಲ್ಲಿ ಇರಿಸಿಕೊಂಡಿದ್ದರಿಂದ ಮಹಿಳೆಯ ಬದುಕು ಸಾಹಿತ್ಯದಿಂದ ಹೊರಗುಳಿಯಬೇಕಾಯಿತು. ಪುರುಷನ ಅಭಿವ್ಯಕ್ತಿ ಸಾಹಿತ್ಯದಲ್ಲಿ ಅರಸನ ವೀರ ಸಾಹಸಗಳು, ಯುದ್ಧ, ವಿಜಯ, ಅರಮನೆ, ಅಂತಃಪುರಗಳ ವೈಭವ ಮೂಡಿಬಂದಿತೆ ಹೊರತು ಅಂತಃಪುರದೊಳಗಿನ ಹೆಣ್ಣಿನ ಕನಸು, ನೋವು ತಲ್ಲಣಗಳು ಮೂಡಿಬರಲಿಲ್ಲ. ಶ್ರೀರಾಮನ ಪಿತೃವಾಕ್ಯ ಪರಿಪಾಲನೆ, ಪ್ರಜಾಪ್ರೀತಿ, ಧರ್ಮಪ್ರಜ್ಞೆಗಳ ಋಣಭಾರದಲ್ಲಿ ರಾಮನನ್ನು ತೂಗುವಲ್ಲಿ, ನಿರಪರಾಧಿಯಾದ ಬಸುರಿ ಸೀತೆಯ ದುಃಖ ಕಾಣಲಿಲ್ಲ. ಊರ್ಮಿಳೆಯ ವಿರಹ ಒಂಟಿತನಗಳ ಅರಿವು ಬರಲಿಲ್ಲ.

ಹೀಗೆ ಹೆಣ್ಣಿನ ಅಂತರಂಗವನ್ನು ಪ್ರವೇಶಿಸಿ ಅವಳ ಕಷ್ಟ ನೋವು ನಲಿವುಗಳನ್ನು ಅರ್ಥೈಸುವುದು ಸ್ತ್ರೀ ಸಂವೇದನೆಗೆ ಸಾಧ್ಯವಾಗುತ್ತದೆ. ಸ್ತ್ರೀಯರ ನೋವನ್ನು ಸ್ತ್ರೀಯರೇ ಅರ್ಥಮಾಡಿಕೊಳ್ಳುವ ಬಗೆಯೇ ಸ್ತ್ರೀ ಸಂವೇದನೆ.

**(ಇ) ಕನ್ನಡ ಸಾಹಿತ್ಯದಲ್ಲಿ ಮೂಡಿಬಂದಿರುವ ಸ್ತ್ರೀ ಸಂವೇದನೆ:**

ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಗಳು ಕಾಣಿಸಿಕೊಂಡ ಬಗೆಯನ್ನು ಗ್ರಹಿಸಬಹುದು. ನಮ್ಮ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಸ್ತ್ರೀ ಪಾತ್ರಗಳು ಮನುವಿನಿಂದ ಎತ್ತಿಕೊಂಡ ಮೂಲಮಾತೃಕೆಗಳೇ. ಈ ಎಲ್ಲಾ "ಹೆಣ್ಣುಗಳು ಮನುವಿನ ಪಂಜರ ಪಕ್ಷಿಗಳು, ದೇವತೆ, ಇಲ್ಲವೆ ರಕ್ಕಸಿ? ಈ ರೀತಿಯ ಪಾತ್ರದಲ್ಲಿ ಹೆಣ್ಣು

ವಚನ ಸಾಹಿತ್ಯ ಬಿಟ್ಟರೆ ದಾಸಪಂಥದಲ್ಲೂ ಇದೇ ಆಲೋಚನೆ ಇರುವುದನ್ನು ಗುರ್ತಿಸಬಹುದು. ದಾಸರು ಹೆಣ್ಣನ್ನು ಮಣ್ಣಿನೊಂದಿಗೆ ಪ್ರಧಾನವಾಗಿ ಪರಿಕಲ್ಪಿಸಿರುವುದರ ಜೊತೆಗೆ, ಸ್ತ್ರೀಯನ್ನು ಕುರಿತು ತಮ್ಮದೇ ಆದ ನೆಲೆಯಲ್ಲಿ ಹೇಳಿದ್ದಾರೆ. ನಾರಿಯನ್ನು ನಂಬಬೇಡಿ, ಸತಿಗೆ ಸ್ವಾತಂತ್ರ್ಯ ಕೊಡದಿರು, ಹೆಣ್ಣಿಗೆ ಭೂಷಣ ಪತಿಭಕ್ತಿಯು, ಪತಿವ್ರತೆ ವನಿತೆಗೆ ಪತಿಯೊಂದೇ ಆಶ್ರಯವು. ಗಂಡನೇ ದೇವರು ಅಂತ ಅಂದುಕೊಂಡ ಹೆಣ್ಣಿಗೆ ಕೈವಲ್ಯ ಸಿದ್ಧಿಸುತ್ತದೆ. ಪರಸ್ತ್ರೀಯರನ್ನು ನೋಡಬಾರದು ಎಂದು ಹೇಳಿದ್ದಾರೆ. ಜೊತೆಗೆ ಹೆಂಡತಿಯನ್ನು 'ಸಾಧನ ಸಂಪತ್ತಾಗಿ' ಕಂಡಿದ್ದಾರೆ. ಇಂತಹ 'ಸತಿಯಿಲ್ಲದವನಿಗೆ ಸಂಪನ್ನತೆಯುಂಟೆ? ಆತ ದಾಸನಾಗಲಾರ' ಎಂದು ಗಂಡಿನ ಸಿದ್ಧಿಗೆ, ಸಾಧನೆಗೆ ಹೆಣ್ಣು ಮುಖ್ಯ ಎಂದು ಗ್ರಹಿಸಿದ್ದಾರೆ.

ದಾಸಪಂಥ ಮತ್ತು ಶರಣ ಸಾಹಿತ್ಯದಲ್ಲಿ ಕೇವಲ ಅನುಭಾವ ಸಾಹಿತ್ಯವಷ್ಟೇ ಅಲ್ಲದೆ ಸ್ತ್ರೀ ಸಂವೇದನೆಯ ವಿಚಾರಗಳು ಇರುವುದನ್ನು ಗುರುತಿಸಬಹುದು. ಇದನ್ನು ಬಿಟ್ಟರೆ ಹದಿನೇಳನೆಯ ಶತಮಾನದಲ್ಲಿ ಸಂಚಿ ಹೊನ್ನಮ್ಮನ ದನಿ ಕೇಳುತ್ತದೆ. ಸಂಚಿಹೊನ್ನಮ್ಮ "ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು" ಎಂದು ಹೇಳಿದ್ದಾರೆ. ಹಾಗೆಯೇ ಹದಿಬದಿಯ ಧರ್ಮವನ್ನು ಹೇಳಿ ಸತಿಯಾದವಳು ಪತಿಯು ದನಿಯೊಂದಿಗೆ ತಪ್ಪು ಮಾಡಿದಾಗ ವಿನಯದಿಂದ ಪ್ರಶ್ನಿಸಬೇಕು ಎಂದಿದ್ದಾರೆ. ಹೊನ್ನಮ್ಮನಿಗಿದ್ದ ಸ್ತ್ರೀಪರ ಧ್ವನಿಯನ್ನು ಅವಳ ಮಾತುಗಳಿಂದ ಕಾಣಬಹುದಾಗಿದೆ.

'ಸರ್ವಜ್ಞ' ತನ್ನ ತ್ರಿಪದಿಗಳಲ್ಲಿ ಹೆಣ್ಣನ್ನು ಹೀಯಾಳಿಸುತ್ತಲೇ, ಹೆಣ್ಣು ಕೇವಲ ಭೋಗದ, ಕಾಮದ ವಸ್ತು ಎಂದಿದ್ದಾನೆ. ಹಾಗೆಯೇ 'ಹೆಣ್ಣನು ನಂಬಿದವ ಕೆಟ್ಟ' ಎಂದು ಹೇಳಿದ್ದಾನೆ. 'ತಂದುದನು ತಿಂದು ಮಲಗುವ ಸತಿ ಅಲ್ಲದಿದ್ದರೆ' ಆಕೆ ಸ್ವರ್ಗಕ್ಕೆ ದಾರಿಯಾಗುತ್ತಾಳೆ. ಗಂಡನ ಇಚ್ಛೆಯನರಿವ ಸತಿಯಿದ್ದರೆ ಇಹಪರ ದರ್ಶನವಾಗುತ್ತದೆ. "ಹೆಣ್ಣನ್ನು ಭೋಗಿಸುವ ಗಂಡೇ ಅವಳಿಗೆ ಶೀಲವನ್ನು ಬೋಧಿಸುವ ವಿಪರ್ಯಾಸ ಈ ಜಗತ್ತಿನದು."[6]

ನವೋದಯ ಕಾಲಘಟ್ಟದಲ್ಲಿ ಬಂದಂತಹ ಎಲ್ಲ ಲೇಖಕರು ಕೂಡ ತಮ್ಮ ಬರವಣಿಗೆಯಲ್ಲಿ ಮಾನವೀಯ ಮೌಲ್ಯವನ್ನು ಕುಟುಂಬದ ಚೌಕಟ್ಟಿನಲ್ಲಿಯೇ ಇಟ್ಟು ನೋಡಲು ಪ್ರಯತ್ನಿಸಿದರು. ಮಹಿಳಾ ಲೇಖಕಿಯರು ಹೆಣ್ಣಿನ ನೋವನ್ನು ಗಮನಿಸಿದರು. ಈ ನೋವನ್ನು ಹೋಗಲಾಡಿಸಬೇಕಾದರೆ ಸಂಘರ್ಷಕ್ಕಿಂತ ಹೊಂದಾಣಿಕೆ ಮುಖ್ಯ ಎಂದು ಹೇಳಿದ್ದರು.

ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಪ್ರಥಮ ಸಾಮಾಜಿಕ ಕಾದಂಬರಿ. ಇದರಲ್ಲಿ ಬಾಲವಿಧವೆಯ ವೈಧವ್ಯದ ನೋವುಗಳನ್ನು ಚಿತ್ರಿಸಿದ್ದಾರೆ. ಇದಕ್ಕೆ ವಿರುದ್ಧವಾಗಿ ಕೆರೂರು ವಾಸುದೇವಾಚಾರ್ಯರು 'ಇಂದಿರೆ' ಕೃತಿಯಲ್ಲಿ ಇಂದಿರೆ ವಿದ್ಯಾವಂತೆ, ಸುಶಿಕ್ಷಿತಳೂ ಆದರೂ ಹಿಂದೂ ಧರ್ಮದ ಉನ್ನತ ಆದರ್ಶಗಳ ಪ್ರತೀಕವನ್ನಾಗಿ ಚಿತ್ರಿಸಿದ್ದಾರೆ.

ಕಾಣಿಸಿಕೊಳ್ಳುತ್ತಾಳೆಯೇ ಹೊರತು ಅವಳು ಹೆಣ್ಣಾಗಿ ಅರಳಿರುವುದು ತುಂಬಾ ವಿರಳವಾಗಿದೆ. ನಮ್ಮ ಸಾಂಸ್ಕೃತಿಕ ಚರಿತ್ರೆಯಲ್ಲಿ ಹೆಣ್ಣನ್ನು ವರ್ಣನಾರ್ಹ ವಸ್ತುವಾಗಿ ವರ್ಣಿಸಿದ್ದಾರೆ."[4]

ಕವಿಗಳು ಸ್ತ್ರೀಯನ್ನು ಪ್ರಕೃತಿಯ ಪ್ರತೀಕವೆಂದು ಆರಾಧಿಸಿದ್ದಾರೆ. ಸಮಯ ಸಿಕ್ಕಾಗಲೆಲ್ಲಾ ಹೆಣ್ಣಿನ ಸೌಂದರ್ಯವನ್ನು ವರ್ಣಿಸಿದ್ದಾರೆ. ಹೆಣ್ಣಿನ ಬೌದ್ಧಿಕ ಹಾಗೂ ಮಾನಸಿಕ ಸ್ವರೂಪ ಚಿತ್ರಣವನ್ನು ಕೊಡುವಲ್ಲಿ ಸೋಲುತ್ತಾರೆ. ಇದಕ್ಕೆ ಕಾರಣವೆಂದರೆ ಮಾನವ ಸಮಾಜದಲ್ಲಿ ಗಂಡುಹೆಣ್ಣು ಅಭಿನ್ನ ಮತ್ತು ಅನಿವಾರ್ಯ ಘಟಕಗಳು ಎಂಬ ಅರಿವಿನ ಕೊರತೆ. ವೇದಕಾಲೀನ ಮಹಿಳೆಯ ಸ್ಥಾನಮಾನಗಳು, ಸ್ವಲ್ಪ ಉನ್ನತ ಮಟ್ಟದಲ್ಲಿಯೇ ಇತ್ತು ಎಂದು ಹೇಳಬಹುದು. ಸ್ತ್ರೀ ತಾಯಿಯಾಗಿ, ಹೆಂಡತಿಯಾಗಿ, ಅಜ್ಜಿಯಾಗಿ ಮನೆಯ ಒಳಗೆ, ಹೊರಗೆ ಗಂಡಿಗೆ ಸರಿಸಮಾನವಾಗಿ ದುಡಿದಿದ್ದಾಳೆ. ಆದರೂ ಅವಳು ಅವಜ್ಞೆಗೆ ಗುರಿಯಾಗಿದ್ದಾಳೆ. ಪುರಾಣ-ಇತಿಹಾಸಗಳ ಕಾಲದಲ್ಲಿ ಹೆಣ್ಣನ್ನು ಕೀಳಾಗಿ ನೋಡುತ್ತಿದ್ದರು. ಮಹಾಕಾವ್ಯಗಳ ಕಾಲಕ್ಕೆ ಅವಳ ಸ್ಥಿತಿ ಇನ್ನೂ ಹದಗೆಟ್ಟಿತು. ಇದಕ್ಕೆ ಕಾರಣ 'ಹೆಣ್ಣು ಒಂದು ಭೋಗ ವಸ್ತು' ಎಂದು ಭಾವಿಸಿದ ರಾಜಪ್ರಭುತ್ವ. ಕೆಲವರಿಗೆ ವೇದ ವಿದ್ಯೆ ಲಭಿಸಿತ್ತು. ಇದರ ಪರಿಣಾಮವಾಗಿ ತತ್ವಜ್ಞಾನ ಮುಂತಾದ ವಿಚಾರದಲ್ಲಿ ಚರ್ಚೆ ನಡೆಸುವಷ್ಟು ವಿಚಾರವಂತರಿದ್ದರು. ಜೈನ ಹಾಗೂ ಬೌದ್ಧಧರ್ಮಗಳ ಕಾಲದಲ್ಲಿ ಸ್ತ್ರೀ ತನ್ನ ದೀನ ಸ್ಥಿತಿಯಿಂದ ಸ್ವಲ್ಪ ಚೇತರಿಸಿಕೊಂಡಳು. ಕಂತಿ, ಶ್ರಾವಕಿ, ಯೋಗಿನಿ, ಭಿಕ್ಷುಣಿಯಾಗಿ ಅವಳು ಕಾಣಿಸಿಕೊಂಡಿದ್ದಾಳೆ.

ಪಂಪಪೂರ್ವ ಯುಗದ ಕಥಾಸಂಕಲನವಾದ 'ವಡ್ಡಾರಾಧನೆ' ಒಂದು ಅಪೂರ್ವ ಕೃತಿ. ಜೈನಧರ್ಮದ ವಿಚಾರಗಳನ್ನು ಒಳಗೊಂಡ ಈ ಕೃತಿಯಲ್ಲಿ ಗಂಡಿನ ಲೌಕಿಕ ಮತ್ತು ಆಧ್ಯಾತ್ಮಿಕ ವೈಫಲ್ಯಕ್ಕೆ ಹೆಣ್ಣೇ ಕಾರಣ ಎಂಬ ಗ್ರಹಿಕೆ ಇದೆ. ಗಂಡಿನ ಭೋಗದ ಸರಕಾಗಿರುವ ಹೆಣ್ಣಿನ ಸ್ಥಿತಿ ಯಾವ ಬಗೆಯಾಗಿತ್ತೆಂದರೆ ವಡ್ಡಾರಾಧನೆಯಲ್ಲಿ ವ್ಯಾಪಾರಿಯ ಮಗ ಒಂದೇ ಹಸೆಯ ಮೇಲೆ ಮೂವತ್ತೆರಡು ಕೂಸು(ಹೆಣ್ಣು)ಗಳನ್ನು ವರಿಸುವಷ್ಟು ಅಥವಾ ನೂರು ಮಂದಿ ಪತ್ನಿಯರಿಂದ ಐನೂರು ಮಕ್ಕಳನ್ನು ಪಡೆಯುವಷ್ಟು ಅಥವಾ ಎಂಟು ಜನ ಹೆಂಡಿರಿದ್ದು ಇನ್ನೊಬ್ಬ ಹೆಣ್ಣನ್ನು ಇಟ್ಟುಕೊಳ್ಳುವಷ್ಟು ಗಂಡಿನ ಕಾಮ ಪ್ರವೃತ್ತಿಯನ್ನು ಕಾಣಬಹುದು.

ಪಾಪ ಮಾಡಿದ ಜೀವ ಹೆಣ್ಣಾಗಿ ಹುಟ್ಟುವುದು ಹಾಗೂ ಹೆಣ್ಣು ಜನ್ಮದಲ್ಲಿ ಮುಕ್ತಿ ಸಾಧ್ಯವಾಗದು ಎಂದು ಜೈನ ಸಿದ್ಧಾಂತ ತಿಳಿಸುತ್ತದೆ. ಪಾಪ ಮಾಡಿದ ವಾಯುಭೂತಿಯ ಜೀವ ಪೆಣ್ಗತ್ತೆಯಾಗಿ, ಪೇಪಂದಿಯಾಗಿ, ಪೆಣ್ಣಾಯಿಯಾಗಿ, ಪೊಲೆಯ ಪೆಣ್ಣಾಗಿ ಹುಟ್ಟುತ್ತೆ - ಇಲ್ಲಿ ವಿಶೇಷವಾಗಿ ಲಿಂಗ ತಾತ್ಸಾರವನ್ನು ಗಮನಿಸಬಹುದು.

ಜನ್ನನ ಯಶೋಧರ ಚರಿತೆಯಲ್ಲಿ ಹಿಂಸೆಯ ನೆಳಲು ಅಮೃತಮತಿಯ ಧರ್ಮ - ಅಧರ್ಮದ ವಿಚಾರಗಳನ್ನು ಕಾಣಬಹುದು. ಜನ್ನ ಸ್ತ್ರೀಯನ್ನು ನೋಡುವ ದೃಷ್ಟಿಯಲ್ಲೆ ಹೆಣ್ಣನ್ನು ಕೀಳಾಗಿ ನೋಡುವ ನೋಟವಿದೆ. ಅಮೃತಮತಿ ಅಷ್ಟವಕ್ರನ ಜೊತೆ ಅನೈತಿಕ ಸಂಬಂಧವನ್ನು ಬೆಳೆಸಿಕೊಳ್ಳಲು ಗಂಡ ಮತ್ತು ಅತ್ತೆಗೆ ವಿಷವಿಕ್ಕಿ ಕೊಲ್ಲುವ ಹಿಂಸೆಯ ಕೆಲಸ ಪರಾಕಾಷ್ಟೆಯ ಮನೋಭಾವವು ಹೆಣ್ಣಿನ ಆಯ್ಕೆಯಾಗಬಾರದು. ಕಾವ್ಯದ ಕೊನೆಯಲ್ಲಿ "ಆ ಸ್ತ್ರೀ ಚರಿತಂ ಅದೇನ್ ಕೆಳೆಯಲ್ ಅರಿದು ಪೆಂಡಿರ ಕೃತಕಂ" ಎಂಬುದಾಗಿ ಹೇಳಿರುವುದು

ಅವನಿಗೆ ಹೆಣ್ಣಿನ ಬಗ್ಗೆ ಇರುವ ಅಪನಂಬಿಕೆ ಸ್ಪಷ್ಟವಾಗಿ ತಿಳಿಯುತ್ತದೆ. ಈ ರೀತಿ ಇರುವುದರಿಂದ ಹೆಣ್ಣು ತನ್ನ ಅಸ್ತಿತ್ವಕ್ಕೆ ಹೋರಾಡುವುದು ಕಷ್ಟದ ಕೆಲಸವಾಗಿದೆ ಎನ್ನಬಹುದು.

ಇನ್ನು ಪಂಪನ "ಆದಿಪುರಾಣ' ಮತ್ತು "ವಿಕ್ರಮಾರ್ಜುನ ವಿಜಯ" ಈ ಎರಡೂ ಕಾವ್ಯಗಳಲ್ಲಿ ಲಿಂಗತಾರತಮ್ಯವಿದೆ. ಪಂಪ ತನ್ನ ಕಾವ್ಯಗಳಲ್ಲಿ ಗಂಡನ್ನು ಕೊಂಡಾಡುವ ರೀತಿಯಲ್ಲಿ ಹೆಣ್ಣನ್ನು ಕೊಂಡಾಡಿಲ್ಲ. ಪಂಪನದು ಪುರುಷಕೇಂದ್ರಿತ ಮನಸ್ಸಿನ ಪ್ರಕ್ರಿಯೆ ಆಗಿದೆ. "ದ್ರೌಪದಿ ಒಬ್ಬ ಪ್ರಸಿದ್ಧ ಹೆಣ್ಣಾಗಿ, ಚತುರ ರಾಜನೀತಿಜ್ಞೆಯಾಗಿದ್ದರೂ ಪಂಪನಿಗೆ ಅದನ್ನು ಒಪ್ಪಿಕೊಳ್ಳುವಲ್ಲಿ ಮುಜುಗರವಿದೆ ಎಂದೆನಿಸುತ್ತದೆ."[5] "ರಾಜ್ಯಕಾರ್ಯದ ಜಾಣ್ಮೆ ಎಲ್ಲಿ, ಅಬಲಾ ಜನದ ಬುದ್ಧಿ ಎಲ್ಲಿ" ಎಂದು ದ್ರೌಪದಿಯಿಂದಲೇ ಈ ಮಾತನ್ನು ಹೇಳಿಸಿ ಮುಜುಗರದಿಂದ ಪಾರಾಗುತ್ತಾನೆ. ಪಂಪಭಾರತದಲ್ಲಿ ದ್ರೌಪದಿಯು ಅವಮಾನಿತಳಾಗಿ "ನನ್ನ ಮುಡಿಯನ್ನು ಹಿಡಿದ್ ಎಳೆದವನನ್ನು ಕೊಲ್ಲಿಸಿ, ಅವನ ಕರುಳಬಳ್ಳಿಯನ್ನು ನನ್ನ ಮುಡಿಗೆ ಮುಡಿಸಿಕೊಳ್ಳುವವರೆಗೆ ನಾನು ಮುಡಿಯನ್ನು ಕಟ್ಟೆನು" ಎಂದು ಪ್ರತಿಜ್ಞೆ ಮಾಡುತ್ತಾಳೆ. ಆದರೆ ಇವಳು ಪುರುಷಶಕ್ತಿಯನ್ನು ನಂಬಿದವಳೇ ಹೊರತು ಸ್ವಶಕ್ತಿಯ ಹೆಣ್ಣುತನದವಳಲ್ಲ.

'ರಾಘವಾಂಕ'ನ ಹರಿಶ್ಚಂದ್ರಕಾವ್ಯದಲ್ಲಿ 'ಚಂದ್ರಮತಿ'ಯ ಪಾತ್ರ ಪಾತಿವ್ರತ್ಯದ ನೆಲೆಯಲ್ಲಿ ಕಂಡುಬರುತ್ತದೆ. ಹರಿಶ್ಚಂದ್ರನಿಗೆ ಒದಗಿ ಬಂದ ಅನೇಕ ಕಷ್ಟಗಳನ್ನು ಹೋಗಲಾಡಿಸುವುದು ಚಂದ್ರಮತಿಯ ಪಾತಿವ್ರತ್ಯವೇ, ಬೇರೆ ಏನೂ ಇಲ್ಲ. ಗಂಡನ ಸಾಲವನ್ನು ತೀರಿಸಲು ಚಂದ್ರಮತಿ ತನ್ನನ್ನು ತಾನು ಮಾರಿಕೊಳ್ಳಬೇಕಾಗುತ್ತದೆ. ಗಂಡಿಗೋಸ್ಕರವಾಗಿಯೇ ಹೆಣ್ಣು ಬದುಕುವುದು ಮತ್ತು ಸಾಯುವುದು ಎನ್ನುವ ವ್ಯವಸ್ಥೆಯಲ್ಲಿ ಹೆಣ್ಣಿನ ಎಲ್ಲಾ ಮಹತ್ವದ ಕಾರ್ಯಗಳನ್ನು ಮುಚ್ಚಿಹಾಕಿ ಗಂಡಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕಾವ್ಯದಲ್ಲಿ ನೀಡಲಾಗಿದೆ.

ವಚನ ಸಾಹಿತ್ಯ ಗಂಡು-ಹೆಣ್ಣಿನ ಸಂಬಂಧವನ್ನು ವಿವಿಧ ಆಯಾಮಗಳಲ್ಲಿ ಶೋಧಿಸಿತು. ಜನಸಮುದಾಯ ಇಲ್ಲಿ ಒಂದು ಆತ್ಮಗೌರವದ ಎಚ್ಚರದಲ್ಲಿ ಮೌನ ಮುರಿದು ಮಾತನಾಡಿತು. ಹೆಣ್ಣಿನ ಅಸ್ತಿತ್ವದ ಬಗ್ಗೆ ವಚನಕಾರರು ಎತ್ತಿದ ಪ್ರಶ್ನೆ ಇಂದಿನ ಹೊಸ ಆಯಾಮಗಳಿಗೆ ಮತ್ತು ಚಿಂತನೆಗೆ ಆಧ್ಯಾತ್ಮಿಕ ಚೌಕಟ್ಟನ್ನು ಒದಗಿಸಿಕೊಟ್ಟಿದ್ದು ವಚನಕಾರ್ತಿಯರ ಚಳುವಳಿಯ ನಿಲುವಾಗಿದೆ. ಅಪಮೌಲ್ಯಕ್ಕೆ ಒಳಗಾದ ತಿರಸ್ಕೃತಕ್ಕೆ ಒಳಗಾದ ವಚನಕಾರ್ತಿಯರನ್ನು ಅವರ ವಚನಗಳನ್ನು ಹಿಂದಿನ ನೆಲೆಗಟ್ಟಿನಲ್ಲಿ ನಿಂತು ನೋಡುವುದಕ್ಕಿಂತ ಇಂದಿನ ಸಂದರ್ಭಕ್ಕೆ ಮುಖಾಮುಖಿಗೊಳಿಸಿದಾಗ ಅಪಮೌಲ್ಯಕ್ಕೆ ಒಳಗಾಗಿದ್ದ ಚಿಂತನೆ ಇಂದು ಮರುಹುಟ್ಟು ಪಡೆದಿದೆ. ಹೆಣ್ಣನ್ನು 'ವಸ್ತು', 'ಒಡವೆ', 'ಮಾಯೆ' ಎಂಬ ಅಪಮೌಲ್ಯದಿಂದ ಬಿಡುಗಡೆಗೊಳಿಸಿ ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ ಎಂಬ ಅರಿವನ್ನು ಮೂಡಿಸಿದರು. 'ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು' ಎನ್ನುವ ನಿಲುವಿನಂತೆ 'ನಮ್ಮ ನಿಷ್ಠೆ ಪತಿಯಾಜ್ಞೆಯಲಿ' ಎನ್ನುವ ನಂಬಿಕೆಯ ಸತಿಯರಿದ್ದಾರೆ. 'ಹೆಣ್ಣು ಮಾಯೆಯಲ್ಲ' ಎಂಬ ಚಿಂತನೆಯ ಜೊತೆಯಲ್ಲೇ "ಹೊನ್ನೆನ್ನದು ಮಣ್ಣೆನ್ನದು ಹೆಣ್ಣೆನ್ನದು ಎಂದು ಮರುಳಾದೆ' ಎಂಬ ಆಲೋಚನೆಗಳೂ ಇವೆ.

'ತಿರುಮಲಾಂಬ' ಆಧುನಿಕ ಕನ್ನಡದ ಮೊದಲ ಲೇಖಕಿ. ಇವರು 1913ರಲಿ 'ಸುಶೀಲೆ' ಎಂಬ ಕಾದಂಬರಿಯನ್ನು ರಚಿಸಿದರು. ಇದರಲ್ಲಿ ಸ್ತ್ರೀ ವಿದ್ಯಾಭ್ಯಾಸಕ್ಕೆ ಸಾಕಷ್ಟು ವಿರೋಧವಿದ್ದ ಸಂದರ್ಭದಲ್ಲಿ ಮತ್ತು ಅಸಮ ದಾಂಪತ್ಯದ ಬಗ್ಗೆ ವಿದ್ಯಾವಂತೆಯಾದ ಹೆಣ್ಣುಮಗಳು ಹೇಗೆ ಕಷ್ಟಗಳನ್ನು ಅನುಭವಿಸುತ್ತಿದ್ದಳು ಅನ್ನುವುದನ್ನು ಚಿತ್ರಿಸಿದ್ದಾರೆ. 'ಕೊಡಗಿನ ಗೌರಮ್ಮ'ನವರ 'ಪುನರ್ವಿವಾಹ' ಕಥೆಯಲ್ಲಿ ಬಾಲವಿಧವೆಯ ಸಮಸ್ಯೆ ಇದೆ. 'ನನ್ನ ಮದುವೆ' ಕಥೆಯಲ್ಲಿ ಕುರುಡಿಯನ್ನು ನಾಯಕ ಮದುವೆಯಾಗುವ ವಿಷಯವಿದೆ. ಪ್ರೇಮವಿವಾಹ, ಸ್ತ್ರೀ ವಿದ್ಯಾಭ್ಯಾಸ, ವಿಧವಾ ವಿವಾಹ ಸಮಸ್ಯೆಗಳು ಇಲ್ಲಿ ಕಂಡುಬರುತ್ತದೆ.

'ಶ್ರೀಮತಿ ಶ್ಯಾಮಲಾದೇವಿ ಬೆಳಗಾವ್‌ಕರ್' ಉತ್ತರ ಕರ್ನಾಟಕದ ಮೊದಲ ಕತೆಗಾರ್ತಿ. ಇವರ ಕಥೆಗಳಲ್ಲಿ ಬರುವ ವಿಚಾರಗಳೆಂದರೆ ಕಷ್ಟಪಟ್ಟು ಕೆಲಸ ಮಾಡಿ ಬದುಕುವ ಮಹಿಳೆಯರು, ತಂದೆತಾಯಿಗಳಿಂದಲೇ ವೇಶ್ಯಾವೃತ್ತಿಗೆ ತಳ್ಳಲ್ಪಟ್ಟವರು, ಇಷ್ಟವಿಲ್ಲದ ಮದುವೆಯಾಗಿ ನೋವನ್ನು ಅನುಭವಿಸುವ ಮಹಿಳೆಯರು – ಹೀಗೆ ಹಲವು ಸ್ತ್ರೀಪಾತ್ರ ಚಿತ್ರಣಗಳಿವೆ.

ನವೋದಯ ಸಾಹಿತ್ಯದಲ್ಲಿ ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ, ಕೆ.ಎಸ್.ನ., ಪು.ತಿ.ನ. ಇನ್ನೂ ಹಲವಾರು ಕವಿಗಳು ಸಾಹಿತ್ಯದ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಅನಂತರ ಬಂದ ಪ್ರಗತಿಶೀಲರ ಸಾಹಿತ್ಯದಲ್ಲಿ ಜಾತಿ, ವರ್ಗ, ಲಿಂಗಾಧಾರಿತ ಅಸಮಾನತೆಯಿಂದ ಸ್ತ್ರೀಯರ ಮತ್ತು ಸಮಾಜದ ಕೆಳಸ್ತರದ ಜನರ ಬದುಕನ್ನು ಹತ್ತಿಕ್ಕಲ್ಪಟ್ಟ ವಿಚಾರಗಳನ್ನು ಗುರ್ತಿಸಿದರು. ಅ.ನ.ಕೃ.ರವರು ಸ್ತ್ರೀಯರಿಗಿರುವ ಸ್ಥಾನಮಾನ, ಅಸಮಾನತೆಗಳನ್ನು ಕಾದಂಬರಿಗಳಲ್ಲಿ ಚಿತ್ರಿಸುತ್ತ ಹೆಣ್ಣು ಕೇವಲ ಭೋಗದ ವಸ್ತುವಾಗಿರಬಾರದು, ಸ್ವಾತಂತ್ರ್ಯ ಸ್ವಚ್ಛಂದತೆಯನ್ನು ಕಾಪಾಡಿಕೊಳ್ಳಬೇಕು ಎಂದು ಹೇಳಿದ್ದಾರೆ.

'ತ.ರಾ.ಸು.' ಅವರ 'ಬಿಡುಗಡೆಯ ಬೇಡಿ' ಕೃತಿಯಲ್ಲಿ ಬಿಡುಗಡೆಯನ್ನು ಬಯಸುವ ಹೆಣ್ಣಿನ ಮಾನಸಿಕ ಸ್ಥಿತಿಗತಿಗಳ ಚಿತ್ರಣವಿದೆ. ಹಾಗೆ 'ನಿರಂಜನರು' ಲಿಂಗಾಧಾರಿತ ಅಸಮಾನತೆಯನ್ನು ವಿಶ್ಲೇಷಿಸುತ್ತಾರೆ. ಮತ್ತು 'ಚದುರಂಗರು' ಕೂಡ ತಮ್ಮ ಕೃತಿಗಳಲ್ಲಿ ಸ್ತ್ರೀಯರ ತಾರತಮ್ಯಕ್ಕೆ ಪುರುಷನೇ ಕಾರಣ ಎಂದು ಗುರುತಿಸುತ್ತಾರೆ.

'ತ್ರಿವೇಣಿ', 'ಡಾ. ಅನುಪಮಾ ನಿರಂಜನ', 'ಹೆಚ್.ವಿ. ಸಾವಿತ್ರಮ್ಮ' ಇವರುಗಳು ಸ್ತ್ರೀ ಮತ್ತು ಪುರುಷರ ನಡುವೆ ಇರುವ ವಿಷಮ ಸ್ವರೂಪ, ಹೆಣ್ಣಿನ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ವಿಶಿಷ್ಟ ರೀತಿಯಲ್ಲಿ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ.

ಪ್ರಗತಿಶೀಲರ ನಂತರ ಬಂದಂತಹ ಸಾಹಿತ್ಯವೇ ನವ್ಯಕಾವ್ಯ. ಈ ಸಾಹಿತ್ಯದಲ್ಲಿ ಗಂಡಿಗೆ ಸರಿಸಮಾನವಾಗಿ ನಿಲ್ಲುವ ಸ್ತ್ರೀಯರು ಅಷ್ಟಾಗಿ ಕಂಡುಬರುವುದಿಲ್ಲ. ಯಶವಂತ ಚಿತ್ತಾರ 'ಮೂರು ದಾರಿಗಳು', 'ಪುರುಷೋತ್ತಮ', ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು', ಲಂಕೇಶರ 'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ' – ಈ ಎಲ್ಲಾ ಕೃತಿಗಳಲ್ಲಿ ಮಹಿಳೆಗೆ ಎಚ್ಚರಿಕೆ ಕೊಡುವ ವಿಚಾರಗಳಿವೆ. 'ಆಲನಹಳ್ಳಿ ಕೃಷ್ಣ'ರ ಬಹುಪಾಲು ಕಥೆಗಳಲ್ಲಿ ಹೆಣ್ಣುಗಳಿಗೆ ವ್ಯಕ್ತಿತ್ವವೇ ಇಲ್ಲ ಅನ್ನುವ ಚಿತ್ರಣವಿದೆ.

'ವೈದೇಹಿ', 'ವೀಣಾಶಾಂತೇಶ್ವರ', 'ನೇಮಿಚಂದ್ರ', 'ರಾಜಲಕ್ಷ್ಮಿ ಎನ್. ರಾವ್' ಇವರಿಂದ ನವ್ಯಸಾಹಿತ್ಯವು ಉತ್ತಮ ರೀತಿಯಲ್ಲಿ ಬೆಳೆದಿದೆ. ವೀಣಾ ಅವರು ಮಹಿಳೆಯ ಸಮಸ್ಯೆಯ ಬಗ್ಗೆ ಹೆಚ್ಚು ಒತ್ತುಕೊಟ್ಟದ್ದಾರೆ. ಸ್ತ್ರೀ ಸಂವೇದನೆಯ ಕೆಲಸ ನವ್ಯಸಾಹಿತ್ಯದಲ್ಲಿ ಆಗಲಿಲ್ಲ. ಮುಂದೆ ದಲಿತ ಬಂಡಾಯದಲ್ಲಿ ಸ್ತ್ರೀಯು ಸಿಡಿದೆದ್ದು ತನ್ನ ಸ್ಥಾನಮಾನಗಳನ್ನು ಗುರುತಿಸಿಕೊಂಡಿದ್ದಾಳೆ.

ಹಿಂದಿನಿಂದಲೂ ಸ್ತ್ರೀಯರು ಪುರುಷನ ಅಧೀನದಲ್ಲಿ ಬದುಕುತ್ತಿದ್ದರು. ಹೆಣ್ಣು ಅನ್ನುವ ಕಾರಣಕ್ಕೆ ಹಲವಾರು ಕಷ್ಟ ನೋವುಗಳನ್ನು ಅನುಭವಿಸಿದ್ದಾಳೆ. ಹಾಗಾಗಿ ದಲಿತ ಬಂಡಾಯ ಸಾಹಿತ್ಯದ ಸಂದರ್ಭದಲ್ಲಿ ಸ್ತ್ರೀ ಇದರ ವಿರುದ್ಧ ಸಿಡಿದೇಳುತ್ತಾಳೆ. ಗೀತಾ ನಾಗಭೂಷಣ್, ಬಿ.ಟಿ. ಲಲಿತಾ ನಾಯಕ್, ಸರಸ್ವತಿ ಜಿಮ್ಮಲಗಿ, ಬಿ.ಟಿ. ಜಾಹ್ನವಿ ಇವರು ದಲಿತರ ಸಮಸ್ಯೆಗಳನ್ನು ಚಿತ್ರಿಸಿದ್ದಾರೆ. ಸಾರಾ ಅಬೂಬಕ್ಕರ್, ಭಾನು ಮುಷ್ತಾಕ್, ಸಬೀಹಾ ಇವರ ಕಥೆ, ಕಾದಂಬರಿ, ಕಾವ್ಯಗಳಲ್ಲಿ ಮಹಿಳಾ ಸಮುದಾಯವನ್ನು ಕುರಿತು ಕಾಳಜಿಯನ್ನು ಅಭಿವ್ಯಕ್ತಿಸಿದ್ದಾರೆ.

ದೇವನೂರು ಮಹಾದೇವರ 'ದ್ಯಾವನೂರು', 'ಒಡಲಾಳ', 'ಕುಸುಮಬಾಲೆ', ಸಿದ್ದಲಿಂಗಯ್ಯರ 'ಸಾವಿರಾರು ನದಿಗಳು', 'ಹೊಲೆಮಾದಿಗರ ಹಾಡು', ಮ.ನ. ಜವರಯ್ಯರ 'ಅತ್ತೆ ಸೊಸೆ ಆತ್ಮಕಥೆ', 'ಮಾಗಿ', ಅರವಿಂದ ಮಾಲಗತ್ತಿಯವರ 'ಕಾರ್ಯ', ಲಂಕೇಶರ 'ಅವ್ವ' – ಈ ಎಲ್ಲಾ ಕೃತಿಗಳಲ್ಲಿ ಹೆಣ್ಣಿನ ಚಿತ್ರಣವನ್ನು ನೀಡಿದ್ದಾರೆ. ದಲಿತ ಸಾಹಿತ್ಯದಲ್ಲಿ ಮಹಿಳೆಯರು ಮಾತ್ರವಲ್ಲದೆ ಇವರ ಪರವಾಗಿ ಪುರುಷರೂ ಕೂಡ ದನಿ ಎತ್ತಿದ್ದಾರೆ.

ದಲಿತ ಬಂಡಾಯದ ಜೊತೆಗೆ ಕನ್ನಡ ಸಾಹಿತಿಗಳು ಸ್ತ್ರೀವಾದಿ ಚಳುವಳಿಯಲ್ಲಿ ತೊಡಗಿಸಿಕೊಂಡರು. ಸಮಾಜದಲ್ಲಿ ಮಹಿಳೆಯ ಶೋಷಣೆ ಹೇಗೆ ಆಗುತ್ತಿದೆ ಅನ್ನುವುದರ ಬಗ್ಗೆ ತಿಳುವಳಿಕೆ ನೀಡಿ ಅದರ ಪರಿವರ್ತನೆಯ ಬಗ್ಗೆ ತಿಳಿಸಿದರು. ಇದನ್ನೇ ಸ್ತ್ರೀ ಸಂವೇದನೆ ಅನ್ನಬಹುದು.

ವಿಜಯಾ ದಬ್ಬೆಯವರ 'ಇರುತ್ತವೆ', 'ನೀರುಲೋಹದ ಚಿಂತೆ' ಈ ಕೃತಿಗಳಲ್ಲಿ ಮಹಿಳೆಯರ ಮೇಲಿನ ದಬ್ಬಾಳಿಕೆಯನ್ನು ತಿಳಿಸುತ್ತಾರೆ. ಮಹಿಳೆಯರ ಬದುಕಿನ ಬಗ್ಗೆ ಮಹಿಳೆಯರೇ 23 ಕೃತಿಗಳನ್ನು ರಚಿಸಿದ್ದು ಅವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿವೆ. ಚ. ಸರ್ವಮಂಗಳಾ, ಪ್ರತಿಭಾ ನಂದಕುಮಾರ್, ಪ್ರೀತಿ ಶುಭಚಂದ್ರ, ಎಂ.ಎಸ್. ವೇದಾ ಇವರೆಲ್ಲರೂ ಸ್ತ್ರೀ ಸಂವೇದನೆಯ ದೃಷ್ಟಿಯಿಂದ ಪ್ರಮುಖ ಬರಹಗಾರರಾಗಿ ಕಂಡುಬರುತ್ತಾರೆ. ಒಟ್ಟಾರೆ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ ಹಲವಾರು ವಿಚಾರಗಳನ್ನು ಶೋಧಿಸಲು ದಾರಿ ಮಾಡಿಕೊಟ್ಟಿದೆ ಎಂದರೆ ತಪ್ಪಾಗಲಾರದು.

**(ಈ) ಪಾಶ್ಚಾತ್ಯರಲ್ಲಿ ಸ್ತ್ರೀ ಸಂವೇದನೆ:**

ಪಾಶ್ಚಿಮಾತ್ಯ ದೇಶಗಳಲ್ಲಿ ಕ್ರಿ.ಶ. 1400ರಲ್ಲಿ ಸ್ತ್ರೀ ಸಂವೇದನೆಯ ಪರಿಕಲ್ಪನೆ ಪ್ರಾರಂಭವಾಗಿ, 1400ರಿಂದ 1789ರ ವರೆಗೆ ಹಂತ ಹಂತವಾಗಿ ಮುಂದುವರೆಯಿತು. ಆಗಿಂದಲೇ ತಮ್ಮ ಶೋಷಣೆಗೆ ಕಾರಣರಾದ ಪುರುಷ ಪ್ರಧಾನ ಸಮಾಜದ ವಿರುದ್ಧ ಹೋರಾಟ ಮಾಡಲು ಮುಂದಾದರು.

ಯುರೋಪಿನ ತುಂಬಾ ರೂಸೋ ಮತ್ತು ಲಾಕರ್ ವಿಚಾರಗಳು ಹದಿನೆಂಟನೆಯ ಶತಮಾನದಲ್ಲಿ ಪ್ರಭಾವ ಬೀರಿದವು. ಎಲ್ಲಾ ಮಾನವರೆಲ್ಲರೂ ಸಮಾನರು ಎಂದು ಸಾರಿದರು. ಸಮಾಜದಲ್ಲಿ ಮಹಿಳೆಯನ್ನು ಕೀಳಾಗಿ ಕಾಣುತ್ತಿದ್ದಾರೆ. ಇದು ಬದಲಾವಣೆಯಾಗಬೇಕು. ಸರಿಸಮಾನವಾದ ಸ್ಥಾನಮಾನಗಳು ದೊರಕಬೇಕು ಎಂದು ಮೇರಿವುಲ್‌ಸ್ಟನ್ ಕ್ರಾಫ್ಟ್ ಎಂಬುವವರು ವಾದವನ್ನು ಮಂಡಿಸಿದ್ದಾರೆ. "ಮಹಿಳೆಯರೂ ಜೀವಿಗಳೆ, ಹಾಗಾಗಿ ಎಲ್ಲಾ ಮನುಷ್ಯರಿಗೆ ಅವಕಾಶಗಳು ದೊರೆಯುವ ರೀತಿ ಸ್ತ್ರೀಗೂ ದೊರೆಯಬೇಕು" ಎಂದು 'ಂ ಗಿಟಿಜಚಿಣಿಚಿಣ ಆಜಿ ಖಿಊಣ ಆಜಿ ಘೂಟಿಟಿ' ಎಂಬ ಕೃತಿಯಲ್ಲಿ ಚರ್ಚಿಸಿದ್ದಾರೆ.

ಫ್ರೆಂಚ್ ಮಹಾಕ್ರಾಂತಿ ಮತ್ತು ಅಮೇರಿಕಾ ಕ್ರಾಂತಿ ನಡೆದು ಬ್ರಿಟಿಷರಿಂದ ಮತ್ತು ದೊರೆಗಳಿಂದ ಶೋಷಣೆಗೆ ಒಳಗಾಗಿದ್ದ ಜನರು ಇದನ್ನು ವಿರೋಧ ಮಾಡಿ ಸ್ವಾತಂತ್ರ್ಯವನ್ನು ಪಡೆದುಕೊಂಡರು. ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿ ಆಯಿತು. ಈ ಸಂದರ್ಭದಲ್ಲಿ ಹಲವಾರು ಮುಗ್ಧ ಜನರು ಶೋಷಣೆಯ ವಿರುದ್ಧ ಸಿಡಿದೆದ್ದರು. ಮಹಿಳೆಯರು ತಮ್ಮ ನೆಲೆಗಳನ್ನು ಪಟ್ಟಭದ್ರ ಹಿತಾಸಕ್ತಿಗಳನ್ನು ಅರ್ಥಮಾಡಿಕೊಳ್ಳುತ್ತ ಮತ್ತು ಪ್ರಶ್ನಿಸುತ್ತ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. 'ಖಚಿಜಚಿಚಿಜ ಖಿಜ ಐಚಿಜ' ಎಂಬ ಶೀರ್ಷಿಕೆಯಲ್ಲಿ 'ಲೇಡಿ ಅಬಿಕ್ಸೇಲ್ ಆಡಮ್ಸ್' ಎಂಬುವವರು ಗಂಡನಿಗೆ ಪತ್ರ ಬರೆದು ಅದರಲ್ಲಿ ಮಹಿಳೆಯರ ಸ್ಥಿತಿ, ಮನಃಸ್ಥಿತಿಗಳ ಬಗ್ಗೆ ಚರ್ಚೆ ಇರುವುದನ್ನು ಕಾಣಬಹುದು.

17ನೆಯ ಶತಮಾನದಲ್ಲಿ ಮಹಿಳೆಯರು ಪ್ರಶ್ನಿಸುವ, ತಿರಸ್ಕರಿಸುವ ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳುವ ಮನೋಭಾವನೆ ಮೂಡಿತು. 1826ರಿಂದ ಮಹಿಳೆಯರಿಗೆ ಶಿಕ್ಷಣವನ್ನು ಕಡ್ಡಾಯ ಮಾಡಲಾಯಿತು. ಮತದಾನದ ಹಕ್ಕನ್ನು ನೀಡಿದರು. ಅನಂತರ ಮಹಿಳೆಯರು ಚಿಕ್ಕ-ಚಿಕ್ಕ ಕೃತಿಗಳ ಮೂಲಕ ತಮ್ಮ ನೋವುಗಳನ್ನು ವ್ಯಕ್ತಪಡಿಸಲು ಪ್ರಾರಂಭಿಸಿದರು.

ಮಹಿಳೆಯರ ಕ್ರೌರ್ಯ ಹಿಂಸೆಗಳನ್ನು ಕುರಿತು ಬೆಟಿಫ್ರೆಡನ್ ರವರು 'ಈಜಚಿಟಿಜ ಒಥಿಣಾಜ' ಅನ್ನುವ ಕೃತಿಯನ್ನು ರಚಿಸಿದ್ದಾರೆ. 'ರಾಷ್ಟ್ರೀಯ ಮಹಿಳಾ ಸಂಘಟನೆ' 1966ರಲ್ಲಿ ಆರಂಭವಾಯಿತು. ಸರ್ಕಾರಿ ಉದ್ಯೋಗಗಳಲ್ಲಿ ಭೇದಭಾವ ಮಾಡಬಾರದು ಎಂದು ಅವಳಿಗೂ ಸಮಾನತೆ ಕೊಡಬೇಕು ಎಂದು 1967ರಲ್ಲಿ ಅಮೇರಿಕಾದ ಅಧ್ಯಕ್ಷರಾಗಿದ್ದ 'ಜಾನ್ಸನ್' ಹಲವಾರು ನಿಯಮಗಳನ್ನು ಮಹಿಳೆಯರಿಗೆಂತಲೇ ಜಾರಿಗೆ ತಂದರು.

ಜರ್ಮನಿ, ಫ್ರಾನ್ಸ್ ದೇಶಗಳಲ್ಲಿ ಮಹಿಳೆಯರು ಎಪ್ಪತ್ತರ ಆರಂಭದಲ್ಲಿ ಸಮಾನವಾದ ಉದ್ಯೋಗವಕಾಶ, ವೇತನ ಹಕ್ಕುಗಳನ್ನು ಪಡೆದುಕೊಂಡರು. ಅದರಲ್ಲೂ ಸ್ತ್ರೀ ಸಂವೇದನೆ ಬೆಳೆಯಲು ಹದಿನೆಂಟನೆ ಶತಮಾನದ ಮೇರಿವುಲ್‌ಸ್ಟನ್ ಕ್ರಾಫ್ಟ್, 19-20ನೆಯ ಶತಮಾನಗಳ ನಡುವೆ ಇದ್ದ ವರ್ಜೀನಿಯಾ ವುಲ್ಫ್, ಸಿಮೋನ್ ದಿ ಬೋವಾ, ಜಾನ್ ಕೀಟ್ಸ್ ಇವರೆಲ್ಲರೂ ಅಡಿಪಾಯ ಹಾಕಿದರು.

ಹದಿನೆಂಟನೆಯ ಶತಮಾನದ ಕಡೆಯಲ್ಲಿ ಬಂದ ಕೃತಿಗಳೆಂದರೆ ಸಿಮೋನ್ ದಿ ಬೋವಾ 'ಖಿಜ ಖಜಛಿಣಟಜ ಖಜಥಿ', ವರ್ಜೀನಯಾ ವುಲ್ಫ್ ಕಾದಂಬರಿ 'ಖಿಜ ಗಿಥಿಚಿಜ ಔಣ', ಕೇಟ್ ಮಿಲ್ಲೆಟ್ ಅವರ 'ಖಜಾಚಿಟ ಕಟಿಟಣಛಿ', ಬೆಟ್ಟಿ ಫ್ರೀಡ್‌ರವರ 'ಖಿಜ ಈಜಟಿಟಿಟಜ ಒಥಿಣಾಜ "ಜಗತ್ತನ್ನು ಗಂಡು ತನಗೆ ಬೇಕಾದಂತೆ ಸೃಷ್ಟಿಸಿದ್ದಾನೆ. ಅವನ ದೃಷ್ಟಿಕೋನಕ್ಕೆ ಅನುಗುಣವಾಗಿ ಜಗತ್ತಿನ ನಿಯಂತ್ರಣವನ್ನು ಮಾಡುತ್ತಾನೆ" ಎಂದು 'ಸಿಮೋನ್ ದಿ ಬೋವಾ' ಹೇಳಿದ್ದಾರೆ. ಈ ರೀತಿ ಪಾಶ್ಚಾತ್ಯರ ನೆಲೆಗಟ್ಟನ್ನು ಕಾಣಬಹುದು.

**(ಉ) ಭಾರತೀಯರಲ್ಲಿ ಸ್ತ್ರೀ ಸಂವೇದನೆ:**

ಸ್ತ್ರೀಯರಿಗೆ ಮಾನವತ್ವವನ್ನು ದೊರಕಿಸಿ ಕೊಡಬೇಕೆಂದು ಮಹಿಳಾವಾದ ಚಿಂತಿಸುತ್ತದೆ. ಋಗ್ವೇದದ ಆರಂಭದ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು ಪುರುಷರಿಗೆ ಸಮಾನವಾಗಿದ್ದು, ಸ್ತ್ರೀಯನ್ನು ಭೂತಾಯಿ, ಗೋಮಾತೆ, ಅಧಿದೇವತೆ ಎಂದು ಹಲವಾರು ಹೆಸರುಗಳಿಂದ ಕರೆಯುತ್ತಿದ್ದರು. ಸ್ತ್ರೀಯರ ವಿಷಯದಲ್ಲಿ ವೇದಗಳ ಕಾಲಕ್ಕೆ ಕಾಣುವ ಮಹತ್ವ ವೇದೋತ್ತರ ಕಾಲದಲ್ಲಿ ಕಂಡುಬರುವುದಿಲ್ಲ. ವೇದಗಳ ನಂತರ ಪಿತೃಪ್ರಧಾನತೆ ಮುಖ್ಯವಾಗಿದ್ದು ಹೆಣ್ಣಿಗೆ ಬೇರೆ, ಗಂಡಿಗೆ ಬೇರೆ ಧರ್ಮಶಾಸ್ತ್ರಗಳು ಹುಟ್ಟಿಕೊಂಡವು. ರಾಮಾಯಣ ಮತ್ತು ಮಹಾಭಾರತಗಳಲ್ಲಿಯೂ ಸ್ತ್ರೀಯರ ನಿರಂತರ ಶೋಷಣೆಗಳನ್ನು ಕಾಣಬಹುದು. ಹೆಣ್ಣಿನ ನೋವಿಗೆ ಪುರುಷನೇ ಕಾರಣವಾದರೂ ಅವನಿಗೆ ಶಿಕ್ಷೆಯಾಗದೆ, ಸ್ತ್ರೀಯರಿಗೆ ಶಿಕ್ಷೆಯಾಗಿರುವುದನ್ನು ಕಾಣಬಹುದು.

ಆತ್ಮ, ಪರಮಾತ್ಮ, ಮೋಕ್ಷ ಇವುಗಳಲ್ಲಿ ನಂಬಿಕೆ ಇಟ್ಟಿರುವ ಜೈನಧರ್ಮವು ಕೂಡ ಸ್ತ್ರೀಯರಿಗೆ ಮೋಕ್ಷವಿಲ್ಲ ಎಂದು ಹೇಳುತ್ತದೆ. ಹೆಣ್ಣು ಮೋಕ್ಷ ಗಳಿಸಬೇಕಾದರೆ ಮುಂದಿನ ಜನ್ಮದಲ್ಲಿ ಪುರುಷನಾಗಿ ಹುಟ್ಟಿ ಮೋಕ್ಷ ಪಡೆಯಬೇಕೆನ್ನುವುದು ಅವರ ಅಭಿಪ್ರಾಯ. ಜೈನಧರ್ಮವು ಹೆಣ್ಣು ಇರುವುದೇ ವೈರಾಗ್ಯಕ್ಕೆ ಎಂದು ಹೇಳಿರುವುದರಿಂದ ಹೆಣ್ಣು ಹಲವಾರು ರೀತಿಯಲ್ಲಿ ಹಿಂಸೆಯನ್ನು ಅನುಭವಿಸಿದ್ದಾಳೆ. ಸ್ತ್ರೀಯನ್ನು ಎರಡನೆಯ ದರ್ಜೆಯ ವ್ಯಕ್ತಿ ಎಂದೇ ಜೈನಧರ್ಮವು ಕಾಣುತ್ತದೆ. ಮುಸ್ಲಿಮರ ದಾಳಿಯ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು ಅತ್ಯಂತ ದಯಾನೀಯ ಸ್ಥಿತಿ ತಲುಪಿರುವುದನ್ನು ನೋಡಬಹುದು. ವೇಶ್ಯಾಪದ್ಧತಿ, ದೇವದಾಸಿ ಪದ್ಧತಿ, ಸತಿಪದ್ಧತಿ, ಬಾಲ್ಯವಿವಾಹ, ಪರದಾಪದ್ಧತಿ – ಈ ರೀತಿಯ ಸಮಸ್ಯೆಗಳನ್ನು ಈ ಸಂದರ್ಭದಲ್ಲಿ ನೋಡಬಹುದು.

ಮಹಿಳೆಯರ ಸ್ಥಾನಮಾನಗಳು ಬ್ರಿಟಿಷರ ಆಳ್ವಿಕೆಯಿಂದ ಸುಧಾರಣೆ ಆಯಿತೆಂದರೆ ತಪ್ಪಾಗಲಾರದು. ಮಹಿಳೆಯರಿಗೆ ಶಿಕ್ಷಣ ಪಡೆಯುವ ಸ್ವಾತಂತ್ರ್ಯ ಇದೇ ಸಂದರ್ಭದಲ್ಲಿ ದೊರೆಯಿತು. ಹದಿನೆಂಟನೆಯ ಶತಮಾನದಿಂದೀಚೆಗೆ ಪ್ರಪಂಚದಲ್ಲಿ ಹಲವಾರು ಕ್ರಾಂತಿಗಳು ಉಂಟಾದವು. ಈ ಕ್ರಾಂತಿಯ ಪರಿಣಾಮ ಸ್ತ್ರೀಯರಿಗೆ ದೊರೆತ ಶಿಕ್ಷಣದಿಂದ ಸ್ತ್ರೀ ಸಂವೇದನೆಯ ತುಡಿತ ಭಾರತೀಯರಲ್ಲೂ ಉಂಟಾಗಲು ಸಾಧ್ಯವಾಯಿತು.

ಮಹಿಳೆಯರ ಅಭ್ಯುದಯಕ್ಕಾಗಿ, ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರದಲ್ಲಿ ಅವರ ನೋವುನಲಿವುಗಳಿಗೆ ಸ್ಪಂದಿಸುತ್ತಾ ಬಂದವರೆಂದರೆ ರಾಜರಾಮ್ ಮೋಹನ ರಾಯ್, ದಯಾನಂದ ಸರಸ್ವತಿ,

ಈಶ್ವರಚಂದ್ರ ವಿದ್ಯಾಸಾಗರ, ಜ್ಯೋತಿರಾವ್‌ಪುಲೆ, ಪೆರಿಯಾರ್, ಗಾಂಧೀಜಿ, ಅಂಬೇಡ್ಕರ್, ಲೋಹಿಯಾ, ಬಿಪಿನ್‌ಚಂದ್ರಪಾಲ್- ಇವರೆಲ್ಲರೂ ಮಹಿಳೆಯರಿಗೆ ಉತ್ತಮ ಸ್ಥಿತಿಗತಿಗಳನ್ನು ಒದಗಿಸಿಕೊಡಲು ನೆರವಾದರು.

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತೀಯ ಮಹಿಳೆಯರ ಸ್ಥಿತಿಗತಿಗಳ ಅಭಿವೃದ್ಧಿಗಾಗಿ 'ಬ್ರಹ್ಮಸಮಾಜ', 'ಆರ್ಯಸಮಾಜ', 'ಥಿಯೋಸೋಫಿಕಲ್ ಸೊಸೈಟಿ' ಮುಂತಾದ ಸಂಸ್ಥೆಗಳು ದುಷ್ಟ ಪದ್ಧತಿಗಳನ್ನು ಮಹಿಳೆಯರ ಮೇಲಿರುವ ದೌರ್ಜನ್ಯಗಳನ್ನು ಹೋಗಲಾಡಿಸಲು ಸತತವಾಗಿ ಪ್ರಯತ್ನಿಸಿದವು. ನಂತರದಲ್ಲಿ ಹತ್ತೊಂಬತ್ತನೆಯ ಶತಮಾನದ ಅಂತ್ಯದಿಂದ ನಿಜವಾಗಿ ಸ್ತ್ರೀವಾದದ ಇತಿಹಾಸ ಪ್ರಾರಂಭವಾಗುತ್ತದೆ.

1886ರಲ್ಲಿ ಕಲ್ಕತ್ತದಲ್ಲಿ ಸುವರ್ಣ ಕುಮಾರಿದೇವಿ ಅವರ ಅಧ್ಯಕ್ಷತೆಯಲ್ಲಿ ಪ್ರಪ್ರಥಮವಾಗಿ ಮಹಿಳೆಯರಿಂದಲೇ ಮಹಿಳೆಯರಿಗಾಗಿಯೇ 'ಬ್ರಹ್ಮ ಸಮಾಜ' ಎಂಬ ಮಹಿಳಾಸಂಸ್ಥೆ ಸ್ಥಾಪನೆಯಾಯಿತು. ಬಿ.ಎನ್.ಮೋತಿಲಾಲ್‌ರವರಿಂದ 1908ರಲ್ಲಿ ಗುಜರಾತಿನಲ್ಲಿ 'ಹಿಂದೂ ಸ್ತ್ರೀ ಮಂಡಲ್' ಸಂಸ್ಥೆ ಪ್ರಾರಂಭಿಸುವುದರ ಜೊತೆಗೆ ಮಹಿಳೆಯರು ಮತ್ತು ಮಕ್ಕಳಿಗಾಗಿಯೇ ಒಂದು ಗ್ರಂಥಾಲಯವನ್ನು ಪ್ರಾರಂಭಿಸಿದರು.

1975ರ ನಂತರದ ಕಾಲಾವಧಿಯನ್ನು ಭಾರತೀಯ ಸ್ತ್ರೀ ಸಂವೇದನೆಯ ಬೆಳವಣಿಗೆಯ ಕಾಲವೆಂದು ಸಂದೇಹವಿಲ್ಲದೆ ಹೇಳಬಹುದು. ಅಂದಿನ ಮಹಿಳೆಯರಾದ 'ರಮಾಬಾಯಿ ರಾನಡೆ', 'ಪಂಡಿತ ರಮಾಬಾಯಿ', 'ರುಕ್ಮಾಬಾಯಿ', 'ಆರ್.ಕಲ್ಯಾಣಮ್ಮ', 'ಸರೋಜಿನಿ ನಾಯ್ಡು', 1910ರಲ್ಲಿ ಐರೋಪ್ಯ ಮಹಿಳೆಯರಾದ 'ಅನಿಬೆಸೆಂಟ್', 'ಮಾರ್ಗರೇಟ್ ಕೆಸಿನ್ಸ್' ಮೊದಲಾದವರಿಂದ 'ಭಾರತೀಯ ಸ್ತ್ರೀ ಸಂಘ' ರಚನೆಯಾಯಿತು. ದೇಶದಾದ್ಯಂತ ಮಹಿಳಾ ಶಿಕ್ಷಣ, ಬಾಲ್ಯವಿವಾಹ, ವಿಧವಾವಿವಾಹ, ಮಹಿಳೆಯರ ಆರೋಗ್ಯ ಮುಂತಾದ ವಿಷಯಗಳ ಬಗ್ಗೆ ಚರ್ಚೆ ಸಮ್ಮೇಳನಗಳು ನಡೆದವು. ಮಹಿಳೆಯರ ಸ್ಥಾನಮಾನಗಳನ್ನು ಕುರಿತಂತೆ ಅನೇಕ ಪರಿಚ್ಛೇದಗಳನ್ನು ನಮ್ಮ ಭಾರತದ ಸಂವಿಧಾನವು ಸಂವಿಧಾನದಲ್ಲಿ ಮೀಸಲಿರಿಸಿದೆ. "ಸಂವಿಧಾನದ 14ನೆಯ ಅನುಚ್ಛೇದವು ಸ್ತ್ರೀ ಪುರುಷರಿಬ್ಬರಿಗೂ ಸಮಾನವಾಗಿ ಕಾನೂನಿನ ರಕ್ಷಣೆ ಒದಗಿಸುತ್ತದೆ. 15ನೆಯ ಪರಿಚ್ಛೇದವು ಲಿಂಗ ತಾರತಮ್ಯ ಮಾಡುವಂತಿಲ್ಲ ಎಂದು ವಿಧಿಸುತ್ತದೆ. 16ನೆಯ ಅನುಚ್ಛೇದದ ಪ್ರಕಾರ ಸರಕಾರಿ ನೌಕರಿ ಅಥವಾ ಸರಕಾರಿ ಹುದ್ದೆಯಲ್ಲಿ ಸ್ತ್ರೀಯರ ವಿರುದ್ಧ ತಾರತಮ್ಯ ಮಾಡಬಾರದೆಂದು ನಿರ್ದೇಶಿಸುತ್ತದೆ."[7]

ಇಪ್ಪತ್ತನೆಯ ಶತಮಾನ ಲಿಂಗಪಾತ್ರಗಳ ಬಗ್ಗೆ ಜಾಗೃತಿಯನ್ನು ಮೂಡಿಸಿದ ಕಾಲ 1975ರಲ್ಲಿ ಸ್ತ್ರೀ ಶೋಷಣೆಯ ತಿಳುವಳಿಕೆ ಪ್ರತಿಯೊಬ್ಬರಲ್ಲೂ ಜಾಗೃತವಾಗುತ್ತಾ ಬಂದು ಸ್ತ್ರೀ ಚಳುವಳಿಗಳು ಉತ್ಸಾಹ, ಸಂಭ್ರಮಗಳಿಂದ ಪ್ರತಿಯೊಬ್ಬರನ್ನು ಆಕರ್ಷಿಸಿದವು. 'ಅಂತರರಾಷ್ಟ್ರೀಯ ಮಹಿಳಾ ವರ್ಷ' ಎಂದು ಇತ್ತೀಚೆಗೆ ಘೋಷಿಸಿತು.

ಹೀಗೆ ಸ್ತ್ರೀ ಸಂವೇದನೆಯೆಂಬುದು ಕೇವಲ ಮಹಿಳಾ ಸಂಘಟನೆಗಳು, ಚಳುವಳಿಗಳ ಮೂಲಕ ಮಾತ್ರವಲ್ಲದೆ ಸಾಹಿತ್ಯ ಕ್ಷೇತ್ರದಲ್ಲೂ ಜಾಗೃತಿಯನ್ನು ಮೂಡಿಸಿದೆ. ಸ್ತ್ರೀ ತನ್ನೆಲ್ಲಾ ಭಾವನೆಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಪಡಿಸುವ ಅವಕಾಶವನ್ನು ಸೃಷ್ಟಿಸಿಕೊಂಡಿದ್ದಾಳೆಂಬುದು ವಾಸ್ತವ ಸಂಗತಿಯಾಗಿದೆ.

## ಕೊನೆಟಿಪ್ಪಣಿಗಳು

1. ಸ್ತ್ರೀವಾದಿ ಚಿಂತನೆಗಳು – ಸಂ. ಡಾ. ಹಾ.ಮಾ. ನಾಗಾರ್ಜುನ – ಪುಟ–341.
2. ಮಹಿಳಾ ಸಂಕಥನ – ಡಾ. ಗಾಯತ್ರೀ ನಾವಡ – ಪುಟ–6.
3. ಸ್ತ್ರೀವಾದಿ ಚಿಂತನೆಗಳು – ಸಂ. ಡಾ. ಹಾ.ಮಾ. ನಾಗಾರ್ಜುನ – ಪುಟ–3–4.
4. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ – ಪುಟ–61.
5. ಮಹಿಳಾ ಸಂಕಥನ – ಡಾ. ಗಾಯತ್ರೀ ನಾವಡ – ಪುಟ–4.
6. ಮಹಿಳಾ ಸಂಕಥನ – ಡಾ. ಗಾಯತ್ರೀ ನಾವಡ – ಪುಟ–10.
7. ಮಹಿಳಾ ಶಿಕ್ಷಣ – ಡಾ. ಮಹಾಬಲೇಶ್ವರರಾವ್ – ಪುಟ–25.

## ಅಧ್ಯಾಯ-4

## ಮಲ್ಲಿಗೆಯ ಮಾಲೆ ಕವನ ಸಂಕಲನದಲ್ಲಿನ ಭಾಷೆ ಮತ್ತು ಶೈಲಿ, ವಸ್ತು ಮತ್ತು ಉದ್ದೇಶ

ಸಾಹಿತ್ಯ ಕ್ಷೇತ್ರದಲ್ಲಿ ಕವಿತೆಗೆ ಯಾವುದು ವಸ್ತುವಾಗಬೇಕು, ಯಾವುದು ವಸ್ತುವಾಗಬಾರದು ಎಂಬುದರ ಬಗ್ಗೆ ಅಂತಹ ಕಠಿಣವಾದ ನಿಯಮಗಳೇನು ಇಲ್ಲ. ಆದರೂ ಕೆ.ಎಸ್.ನ ರವರಿಗೆ ನೋವು ವಸ್ತುವಾಗುವುದರ ಬಗ್ಗೆ ಒಂದು ರೀತಿಯ ಜಿಹಾಸೆ? ಆದಕ್ಕಾಗಿಯೇ ನೋವ ಹಾಡಿದರೆ ಇನ್ನಷ್ಟು ನೋವಾಗುವುದು ಎಂಬ ಅನಿಸಿಕೆ. ನೋವು ವಸ್ತುವಾದಾಗ ಕವಿತೆಯಲ್ಲಿ ಅದು ಕಲೆಯಾಗಿ ಪರಿವರ್ತಿತವಾಗುವುದನ್ನು ನೋಡುತ್ತೇವೆ. ಆಗ ಅದು ನೋವಿನ ಅನುಭವವಾಗಿಯೇ ಉಳಿಯದೇ ಸುಖಾನುಭವವಾಗಿ ಮಾರ್ಪಡುವುದು.

ಅರಿಸ್ಟಾಟಲ್ನ ಶೋಧನ ತತ್ವವಾಗಲೀ, ಅಭಿನವ ಗುಪ್ತಾಚಾರ್ಯರ ರಸಾನುಭವ ಸಿದ್ಧಾಂತವಾಗಲೀ ಇದನ್ನೇ ಹೇಳುತ್ತದೆ. ರಾಮಾಯಣದ ಪರಿಭಾಷೆಯಲ್ಲಿ ಹೇಳುವುದಾದರೆ ಶೋಕ ಶ್ಲೋಕವಾಗುವ ಪ್ರಕ್ರಿಯರ ಇದು. ಹಾಗೇ ನೋಡಿದರೆ ನೋವು ನಮ್ಮ ಭಾವವನ್ನು ಶೋಧಿಸುವ ಹಾಗೆ ನಲಿವು ಶೋಧಿಸಲಾರದು ಎಂದು ಹೇಳಬಹುದು.

ಕೆ.ಎಸ್.ನ ರವರಿಗೆ ಮುಳ್ಳನ್ನು ಕುರಿತು ಹಾಡುವುದು ಬೇಡ, ಗುಲಾಬಿ ಕುರಿತು ಹಾಡಬೇಕೆಂಬುದು ಕವಿಯ ಅಭಿಪ್ರಾಯ. ಆದರೆ ಕವಿ ಹೇಳುವ ಈ ಗುಲಾಬಿ, ಮಾಮರ, ಕೋಗಿಲೆ, ಮಲ್ಲಿಗೆ ....... ಇವಿಷ್ಟೆ ಜೀವನವಲ್ಲ. ಕವಿಗೆ ಮೃದುವಾದುದರ ಬಗ್ಗೆ ಮೋಹ ಕಠಿಣತೆಯ ಬಗ್ಗೆ ತಿರಸ್ಕಾರವಿದೆ.

ಕವಿ ಇದಕ್ಕೆ ಸಮರ್ಥನೆಯಾಗಿ ಅಬ್ಬರದ ಮಾತುಗಳು ಯಾರಿಗೂ ಬೇಕಿಲ್ಲ ಇಲ್ಲಿ ಎಂಬ ಮಾತು ಹೇಳಿದ್ದಾರೆ. ಕಾಮನ ಬಿಲ್ಲಿನ ಭಾಷೆಯಲ್ಲಿ ಕವಿತೆಯನ್ನು ಬರೆದಿಡಲಿ ಓದುವವರ ಸಲುವಾಗಿ ಎಂದೂ ಹೇಳಿದ್ದಾರೆ. ಕವಿಯ ಕಾವ್ಯವೇನೋ ಕಾಮನಬಿಲ್ಲಿನ ಭಾಷೆಯಲ್ಲಿದೆ. ಆದರೆ ಎಲ್ಲಾ ಕವಿಗಳಿಗೂ ಈ ಸೂತ್ರ ಹೇರಲು ಸಾಧ್ಯವಿಲ್ಲ. ವಾಲ್ಮೀಕಿ, ವ್ಯಾಸ, ಪಂಪ, ಕುಮಾರವ್ಯಾಸಾದಿ ಕವಿಗಳ ಕಾವ್ಯಗಳಿಗೂ ಕಾವ್ಯತ್ವ ತಪ್ಪಬಹುದು ಆದಕ್ಕೆ ಕೆ.ಎಸ್.ನ ರವರ ನಿಲುವನ್ನು ಕೇವಲ ಜನಪ್ರಿಯತೆಯ ದೃಷ್ಟಿಯಿಂದ ಒಪ್ಪಿಕೊಳ್ಳಬಹುದು.

ಹಾಗೆಯೇ ಒಂದು ಮಾತಂತು ಸತ್ಯ ಕವಿ ಹೇಳುವ ನೀರು ಬೆರಸದ ಹಾಲು..... ನಮಗೆ ತುಷ್ಟಿಯನ್ನು, ಪುಷ್ಟಿಯನ್ನು ನೀಡುತ್ತದೆ. ಇಂತಹ ಶುದ್ಧ ಪರಿಪಕ್ವ ಮನಸ್ಸಿನ ಕವಿಯ ಈ ಸರಳ ಸುಂದರ ಚೇತೋಹಾರಿ ಕಾವ್ಯಕ್ಕೆ ಎಂತಹವರು ಮಾರುಹೋಗುತ್ತಾರೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇವರ ಕವನಗಳು ಯುವ ಕವಿಗಳಿಗೆ ಸಂದೇಶವನ್ನು ಹೊತ್ತು ತರುತ್ತವೆ. ಸಹಜ ಕವಿಯಾದ ಕೆ.ಎಸ್.ನ ರವರ ಮಾತು ಮೌನದ ನಡುವೆ ಇರುವ ಅಂತರದಲ್ಲಿ ಬಾನಾಡಿಯಂತೆ ಭಾವ ಮೂಡಿ ಬಂದಿದೆ. ಸ್ವತಂತ್ರವಾದ ಭಾವ ನಿರ್ಧಿಷ್ಟ ಛಂದೋಬಂಧದಲ್ಲಿ ಕವಿತೆಯಾಗಿ ಜನ್ಮ ತಳೆಯುತ್ತದೆ ಎಂಬುದರ ಬಗ್ಗೆ ಕವಿಗೆ ಸ್ಪಷ್ಟ ದೃಷ್ಟಿ ಇದೆ.

ಹಾಗೆಯೇ ಕವಿಯ ನಿಜವಾದ ಬದುಕೇ ಒಂದು ಹಾಡಾಗಿದೆ. ಬದುಕೇ ಕಾವ್ಯವಾದರೆ ಅದು ಕವನ ಬರೆಯುವುದಕ್ಕಿಂತ ಶ್ರೇಷ್ಠ ಎಂಬ ಸಂದೇಶವಾಗಿರಬಹುದು. ಕವಿತೆಗಿಂತ ಬದುಕು ದೊಡ್ಡದು ಎಂಬುದರಲ್ಲಿ ಯಾವ ಸಂಶಯವಿಲ್ಲ. ಕವಿಯ ಕಾವ್ಯ ತತ್ವದ ಎರಡು ಮುಖ್ಯ ವಿಚಾರಗಳೆಂದರೆ ಚೆಲುವು ಮತ್ತು ಅರಕೆ...... ಅಸ್ಪಷ್ಟತೆಯು ಒಂದು

ಚೆಲುವು ಎಂದಿದ್ದಾರೆ. ಅರಕೆಯಿಂದಲೇ ಕವಿತೆ ಹುಟ್ಟುವುದು. ಇವೆರಡು ಕಾವ್ಯ ಸೃಷ್ಟಿಗೆ ಕಾರಣವಾಗುತ್ತವೆ. ಅಸ್ಪಷ್ಟತೆ ಅತಿಯಾದರೆ ಅದು ಕಾವ್ಯಕ್ಕೆ ಅಪಾಯಕಾರಿಯಾಗಿ ಪರಿಣಮಿಸಬಹುದು. ಕವಿ ತನ್ನ ಅಪೂರ್ಣತೆಯನ್ನು ಹೋಗಲಾಡಿಸಿಕೊಳ್ಳಲು ಕಾವ್ಯ ಬರೆಯುತ್ತಾನೆ ಎಂದಿದೆ. ಕವಿ ಹೇಳುವ ಹಾಗೆ ಕವಿತೆ ಶಾಸ್ತ್ರವನ್ನು ಮೀರಿರುವ ಕಲೆ. ಆದಕ್ಕೆ ಶಾಸ್ತ್ರಕಾರರ ಬೀದಿಯಲ್ಲಿ ಓಡಾಡದಿರು ಎಂದು ಕರೆ ಕೊಡುತ್ತಾರೆ.

ಕವಿ ಕೆ.ಎಸ್.ನ ರವರಿಗೆ ಶಾಸ್ತ್ರಗಳ ಪರಿಚಯ ಅಗತ್ಯವಿಲ್ಲ ಎಂದಲ್ಲ. ಅದಕ್ಕೆ ಪಾಂಡಿತ್ಯದ ಹೊರೆಯಾದರೆ ಕಲೆ ನಷ್ಟವಾಗುತ್ತದೆ. ಕವಿತೆ ಹೊಳೆದು ಬೆಳೆಯುವಂತದ್ದು, ಅದನ್ನು ರಕ್ಷಿಸಿಕೊಳ್ಳಬೇಕಾದುದು ಸೃಜನಶೀಲ ಬರಹಗಾರನ ಕರ್ತವ್ಯ.

"ಸಿಗರೇಟಿನ ಹೊಗೆಯಲ್ಲಿ ಎದ್ದು ಹೋಗುವ ಮಂದಿ
ಕವಿತೆಯ ವಿಮರ್ಶೆಯನು ಮಾಡುತಿಹರು"......ಹೀಗೆ ಕವಿಗೂ ಅವರ ಬರಹದ ಕಾಲಕ್ಕೆ ಟೀಕೆ ಟಿಪ್ಪಣಿಗಳು ಬಂದಿದ್ದಕ್ಕೆ ಇಂತಹ ವಿಮರ್ಶೆಯ-ವಿಮರ್ಶಕರ ಬಗೆ ಎಚ್ಚರದಿಂದ ಇರಬೇಕು ಎಂದಿದ್ದಾರೆ. ಇಂದು ಕನ್ನಡದ ವಿಮರ್ಶೆ ಎಲ್ಲರನು ಒಳಗೊಂಡಂತೆ ನಿಷ್ಪಕ್ಷಪಾತವಾಗಿ ಇನ್ನೂ ಬರಬೇಕಾಗಿದೆ. ಶತಮಾನಗಳೇ ಕಳೆದರೂ ಕೆ.ಎಸ್.ನ ರವರ ಕಾವ್ಯದ ಜನಪ್ರಿಯತೆ ಅಬಾಧಿತವಾಗಿ ಉಳಿಯುತ್ತದೆ. ಕವಿಗೆ ಅಭಿವ್ಯಕ್ತಿ, ವೈವಿಧ್ಯತೆ, ನಿರ್ದಿಷ್ಟ ದೃಷ್ಟಿಕೋನದ ಪ್ರತಿಪಾದನೆ, ಜೀವನಮೀಮಾಂಸೆ ಮತ್ತು ಕಾವ್ಯ ಮೀಮಾಂಸೆ ಬೇರೆಯಾಗಿ ಕಂಡಿಲ್ಲ. ಕವಿತೆಗೆ ಜೀವನವೇ ಸ್ಫೂರ್ತಿ ಕೇಂದ್ರ, ಜೀವನಕ್ಕೆ ಕವಿತೆ ಸ್ನೇಹ ಸಿಂಚನ ಮಾಡುವ ಒಂದು ಅಪೂರ್ವ ಅನುಭವ.

'ಪಯಣ' ಎಂಬುದು ಕೆ.ಎಸ್.ನ ರವರ ಒಂದು ಆಶಯ. ಈ ಗೊತ್ತಿಲ್ಲದ ಒಂದು ಅನಂತ ಪಯಣದಲ್ಲಿ ಸಂತಸ ಒಂದೇ ಚಿಲುಮೆ. ಅದರ ಮೇಲೆಯೇ ಕವಿಯ ಕೇಂದ್ರ ಪ್ರಜ್ಞೆ, ಪಯಣದ ಈ ಹಾದಿಯಲ್ಲಿ ಚೆಲುವಿನ ಅನ್ವೇಶಣೆಯೇ ಕವಿಯ ಮುಖ್ಯ ಧ್ಯೇಯ. ಮೃದುವಾದ ಭಾವಗಳನ್ನು ತಟ್ಟಿ ಎಬ್ಬಿಸುವ ಪದ್ಯಗಳಿವೆ. ಹೆಣ್ಣು ಮತ್ತು ಹೂವುಗಳನ್ನು ಜೊತೆಗೂಡಿಸಿ ಸಾಗಿಸಿದೆ. ಕವಿಯ ದೃಷ್ಟಿ ಮತ್ತು ಸೃಷ್ಟಿಗೆ ಇವೇ ಪೂರಕ ಮತ್ತು ಪ್ರೇರಕ ಶಕ್ತಿಗಳು. ಹೂವು-ಹೆಣ್ಣು, ನಾ ನಿನ್ನ ನೆನೆದಾಗ ಕವನಗಳೇ ಇದಕ್ಕೆ ಸಾಕ್ಷಿಯಾಗಿವೆ.

"ಹೂವೆ ಮುನ್ನುಡಿ ನನ್ನ ಎಲ್ಲ ಕವಿತೆಗೆ ಕತೆಗೆ
ಹೂವ ಸಹವಾಸವನು ಮರೆಯಲಾರೆ
ಚೆಲುವೆಯರ ಚೆಲುವೆ ಕಿಲಕಿಲನೆ ನಕ್ಕುದ ಕಂಡೆ
ಬೈಗು ಬೆಳಗುಗಳಲ್ಲಿ ಅದನು ಕಂಡೆ"

ಹೀಗೆ ಕವಿಯ ಕಾವ್ಯದ ನಿತ್ಯ ವಂಸಂತ ಹೂ ಮತ್ತು ಚೆಲುವೆ. ಅವುಗಳ ಸಹವಾಸದಲ್ಲೇ ಕವಿಯ ಕಾವ್ಯ ಅರಳಿರುವುದು ಸ್ಪಷ್ಟ. ಬಳ್ಳಿಯಲ್ಲಿ ಹೂವು ಅರಳಿದಷ್ಟೇ ಇದು ಅವರಿಗೆ ಸಹಜ. ಹೂವು ಕವಿಯ ಒಳ-ಹೊರಗೂ, ಅದನ್ನೆಲ್ಲಾ ಮುಡಿದು ರಂಜಿಸುವವಳು ಹೆಣ್ಣು. ಅವರ ಬಹುತೇಕ ಕಾವ್ಯ ಹೂವಿನ ಕಾವ್ಯ. ಹೂವಿಲ್ಲದೇ ತಾವಿರುವುದಿಲ್ಲ ಎಂದಿದ್ದಾರೆ. ಚೆಲುವಿನ ಒಲವಿನ ಕಾವ್ಯ ಸುಧೆ ಹರಿಸಿದ್ದಾರೆ. ಒಟ್ಟಾರೆ ಸ್ತ್ರೀ ಸಂವೇದನೆಯ ಒಳ ಹೊರಗನ್ನು ಸಾಮಾಜಿಕ ಚೌಕಟ್ಟಿನ ಒಳಗೆ ಎಲ್ಲೆ ಮೀರದಂತೆ ಚೆಲುವು, ಒಲವು ವಿರಸಗಳ ಕೊಂಡಿ ಬೆಸೆದು ಸುಂದರ ರಂಗೋಲಿ ಚಿತ್ರಸಿದ್ದಾರೆ. ಒಲವಿನ ಕವಿ ಕೆ.ಎಸ್.ನ ರವರ ಕಲ್ಪನೆಯಲ್ಲಿ ಸ್ತ್ರೀ ಮಾದರಿಯು ಮುಖ್ಯ ಭೂಮಿಕೆಯಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ಅಧ್ಯಾಯ-5

## ಕೆ.ಎಸ್.ನರಸಿಂಹಸ್ವಾಮಿಯವರ ಸಮಗ್ರಕಾವ್ಯದಲ್ಲಿ ಸ್ತ್ರೀ ಸಂವೇದನೆಯ ಪರಿಕಲ್ಪನೆ.

ಕೆ.ಎಸ್.ನ ರವರು 1986 ರಲ್ಲಿ ಮಲ್ಲಿಗೆಯ ಮಾಲೆ ಎಂಬ ಸಮಗ್ರ ಕಾವ್ಯ ಸಂಕಲನ ಬಿಡುಗಡೆ ಮಾಡಿ ಒಲುಮೆಯ ಕವಿ ಎಂದು ಜನಾನುರಾಗ ಪಡೆದಿದ್ದಾರೆ. ನನ್ನ ಕಾವ್ಯದ ಕತೆ ಎಂಬ ಮುನ್ನುಡಿ ಬರೆದಿದ್ದು ಇದರಲ್ಲಿ ಹದಿನಾಲ್ಕು ಕವನ ಸಂಗ್ರಹಗಳಿವೆ.

" ಋತುಗತಿಯಲ್ಲ ಶೈಲಿಮತಿಯಲ್ಲ ಶಬ್ದ ರತಿಯಲ್ಲ ನನ್ನ ಕವಿತೆ
ಪದಪದಕವಿಲ್ಲ ತಲೆ ಭಾರವಿಲ್ಲ ನಿಮ್ಮುಸಿರು ನನ್ನ ಕವಿತೆ
ಅಹಂಕಾರವಿಲ್ಲ ಅಲಂಕಾರವಿಲ್ಲ ನಿಜಾಚಾರ ನನ್ನ ಕವಿತೆ
ನನ್ನಾಸೆಗಣ್ಣ ಬಂದರಿಗೆ ಬಂದ ಶರನ್ನೌಕೆ ಈ ಕವಿತೆ "

ಹೀಗೆ ಹಾಡಿದ ಹೀಗೆ ಬದುಕಿದ ಕೆ.ಎಸ್.ನ ರವರ ಕಾವ್ಯದ ಬಗ್ಗೆ ಬರೆಯುವುದೆಂದರೆ ತತ್ಕಾಲೀನದ ಮಂಜು ಮುಸುಕಿದ ದಾರಿಯಲ್ಲಿ ಮರೆಯಾಗಿರುವ ಸಾರ್ವಕಾಲಿಕದ ಬಗ್ಗೆ ಬರೆದ ಹಾಗೆ. ತನ್ನ ಅನುಭವದ ಕನ್ನಡಿಯಲ್ಲಿ ಒಟ್ಟು ಮನ್ನುಷ್ಯಕುಲದ ಹಾಡು-ಪಾಡುಗಳನ್ನು ಕಂಡ, ಕಂಡರಸಿದ ಈಕವಿ ನಮ್ಮೆಲ್ಲರ ಬದುಕಿಗೆ ಬರವಸೆಯ ಬೆಳಕು ತುಂಬಿದವರು. ಚೆಲುವನ್ನು ಬಲ್ಲವರಿಗೆ ಕವಿತೆಯಾಗಿ, ಒಲವನ್ನು ಬಲ್ಲವರಿಗೆ ಹಾಡುಗಳಾಗಿಸಿದ್ದಾರೆ.

ಕೆ.ಎಸ್.ನ ರವರದ್ದು ಬಾಳಿನಾಸೆಗೆ ಹಾಲನೆರೆಯುವ ಭಾವಗೀತೆಯೇ ಹೌದು. ಕನ್ನಡ ಜನಪದ ಮತ್ತು ವಿಮರ್ಷೆಯು ಇವರ ಮೈಸೂರು ಮಲ್ಲಿಗೆಯ ಮೋಹಕತೆಯಿಂದ ಹೊರಗೆ ಬಂದಿರುವುದು ಅಪರೂಪ. ನನ್ನ ಈ ಲೇಖನವು ಬಹು ಮಟ್ಟಿಗೆ ಕೃತಜ್ಞತೆ ಸ್ವಲ್ಪ ಮಟ್ಟಿಗೆ ಅನಾವರಣ. ಏಕೆಂದರೆ ಎಲ್ಲಾ ಕಲೆಯ ಹಾಗೆ ಕವಿತೆಯು ಮೂಕವಾದುದು ಅದು ತನ್ನನ್ನು ಕುರಿತು ಮಾತನಾಡುವ ಮಧ್ಯವರ್ತಿಗಳನ್ನು ಬಯಸುತ್ತದೆ.

ಕೆ.ಎಸ್.ನ ರವರ ಕಾವ್ಯವು ಮನುಷ್ಯನ ಚರಿತ್ರೆಯ ಗಂಭೀರ ಅನ್ವೇಷಣೆ ನಡೆಸುತ್ತದೆ. ಅದು ಕೇವಲ ರಾಜವಂಶಗಳ, ವರ್ಗಕಲಹಗಳ ಚರಿತ್ರೆಯಲ್ಲ. ಚರಿತ್ರೆಯ ವಿವರಗಳನ್ನು ಅಮೂರ್ತಗೊಳಿಸಿ ಅದರ ಅರ್ಥವನ್ನು ತೆಗೆದುಕೊಂಡು ಪರಿಶೀಲಿಸಿದಾಗ ಅದು ಮಾನುಷಚೇತನದ ಏಳು-ಬೀಳುಗಳ ಕಥನವಾಗುತ್ತದೆ. ಇಲ್ಲವಾದರೆ ಸಾಂಪ್ರದಾಯಿಕ ಇತಿಹಾಸದಲ್ಲಿ ಮನುಷ್ಯನ ಸ್ಥಾನಮಾನಗಳು ಹೀಗೆ ನಿರ್ಲಕ್ಷಿತವಾಗುತ್ತವೆ. ಮನುಷ್ಯ ಜೀವನದ ಸಾರ್ಥಕತೆ ಎಂದರೆ ಏನನ್ನಾದರೂ ಸಾಧಿಸುವುದು, ಸಂತೋಷವಾಗಿ ಬಾಳುವುದು ಇದು ಯಾರನ್ನೋ ಗೆಲ್ಲುವುದಕ್ಕಿಂತ ಮುಖ್ಯ ಎನ್ನುವ ತಿಳುವಳಿಕೆಯು ಈ ಕವಿಯ ಸಹಜ ವಿಕಾಸವಾಗಿದೆ. ಮನುಷ್ಯನ ಅಹಂಕಾರಕ್ಕೆ ಮದ್ದನ್ನೆರೆಯುವ ದಾರಿಯು ಪ್ರಕೃತಿಯೊಂದಿಗೆ ಸಹ ಜೀವನ ನಡೆಸುವುದೇ ಆಗಿದೆ ಎಂದಿದ್ದಾರೆ.

ಕೆ.ಎಸ್.ನ ರವರ ಈ ಸಮಗ್ರ ಕಾವ್ಯದಲ್ಲಿ ಭಾವ ಗೀತೆಗಳಿದ್ದು ಅದರಲ್ಲಿ ಸ್ತ್ರೀ ಪ್ರಧಾನ ಕವಿತೆಗಳಿವೆ. ಅವುಗಳಲ್ಲಿ ಸ್ತ್ರೀ ಸಹಜ ಪ್ರೌವೃತ್ತಿ ತುಡಿತಗಳಿವೆ..... ನಡೆಯುತ್ತಿರುವ ತನಕ ಹಾದಿಯೂ ಉಂಟು ಹಾಡು ಉಂಟು ಎಂಬ ಭರವಸೆ ತುಂಬಿದ್ದಾರೆ. ಇವರು ತಮ್ಮ ಪ್ರೀತಿಯ ಪತ್ನಿಗೆ, ಬರೆಸಿದ ಗೆಳೆಯ ಎಂ.ವಿ.ವೆಂಕಟೇಶ ಮೂರ್ತಿಯವರಿಗೆ,

ಕೆ.ವಿ.ನಾರಾಯಣರಿಗೆ ಕೃತಜ್ಞರಾಗಿದ್ದಾರೆ. ಕವಿ ತಮ್ಮೆಲ್ಲಾ ಕಾವ್ಯಗಳಲ್ಲಿ ಸಮಾಜದ ವಿವಿಧ ಮಾನವೀಯ ಸಹಜ ಗುಣ ರೀತಿಗಳನ್ನು ಚಿತ್ರೀಕರಿಸಿದ್ದಾರೆ. ಕೆ.ಎಸ್.ನ ರವರ ಕಾವ್ಯಗಳಲ್ಲಿ ಸಾಮಾಜಿಕ ಕವಿತೆಗಳು, ಸಂಸ್ಕೃತಿ, ರಾಜಕೀಯತೆ, ಒಲುಮೆಯ ಗೀತೆಗಳು, ದಾಂಪತ್ಯ, ವಿರಹ, ವಿಡಂಬನೆಯ, ಒಸಗೆಯ, ಗಂಡ ಹೆಂಡಿರ ಪ್ರೇಮ ಗೀತೆಗಳಲ್ಲಿ ಎಲ್ಲವೂ ತುಂಬಿ ತುಳುಕಾಡುತ್ತಿವೆ. ಪ್ರಸ್ತುತ ಈ ಸಮಗ್ರ ಕಾವ್ಯ ಸಂಕಲನದಲ್ಲಿ ನಾನು ಎಲ್ಲಾ ಆಯ್ದ ಕವಿತೆಗಳಲ್ಲಿ ಸ್ತ್ರೀ ಸಂವೇದನೆ ಕುರಿತು, ಸ್ತ್ರೀ ಕಲ್ಪನೆ ಕುರಿತು ಅವುಗಳಲ್ಲಿರುವ ಕವಿಯ ಕಲ್ಪನೆಯ ತಿರುಳನ್ನು ಹೊರ ತರಲು ಸಾಧ್ಯವಾದಷ್ಟು ಪ್ರಯತ್ನಿಸಿದ್ದೇನೆ.

## ಕೆ.ಎಸ್.ನ ರವರ ದೃಷ್ಟಿಯಲ್ಲಿ ಸ್ತ್ರೀ ಕಲ್ಪನೆ

ಕವಿ ಸ್ತ್ರೀಗೆ ಒಂದು ಜೀವಂತ ದೈವೀ ಸ್ವರೂಪ ನೀಡಿದವರು. ಸ್ತ್ರೀ ತತ್ವದಿಂದಲೇ ಈ ಲೋಕದ ಅಭ್ಯುದಯ. ಪುರುಷ ಆದರ ನೆರಳು ಎಂದು ಸಾರಿದ್ದಾರೆ. ಈ ಸಮಾಜವೇ ಹೆಣ್ಣಿನ ಮಡಿಲಿನ ಕೂಸಾಗಿದೆ. ಆಕೆಯಿಂದಲೇ ಸರ್ವಕ್ಕೂ ಅಳಿವು, ಉಳಿವು, ಮಹತ್ತು ಎಂದು ನಂಬಿದ್ದಾರೆ. ಹೆಣ್ಣಿನ ಹಿಂಸೆ, ಅಳಲು, ನೋವು, ವಿರಹ, ಕಂಬನಿ, ತುಡಿತ, ವೈರಾಗ್ಯ, ಚೆಲುವು, ಯವ್ವನ, ಆಸೆ, ಯೋಗ್ಯತೆ, ಆಕರ್ಷಣೆ ಸಕಲವನ್ನು ಮನಸೂರೆಯಾಗುವಂತೆ ಕಟ್ಟಿಕೊಟ್ಟಿದ್ದಾರೆ.

ಹೆಣ್ಣು ಭೂದೇವಿ, ಮಾತೃಸ್ವರೂಪಿಣಿ, ದೈವದ ಚಿಹ್ನೆ, ಹೆಂಡತಿ, ಅತ್ತಿಗೆ, ನಾದಿನಿ, ಮಗಳು, ಸಹೋದರಿ, ವೇಶ್ಯೆ, ಅಜ್ಜಿ, ಗೃಹಿಣಿ, ಮಡದಿ ಎಂಬ ಹತ್ತಾರು ಮುಖಗಳಲ್ಲಿ ಸ್ತ್ರೀ ತುಡಿತವನ್ನು ಎಳೆಎಳೆಯಾಗಿ ಚಿತ್ರಸಿದ್ದಾರೆ. ಒಟ್ಟಾರೆ ಅವರ ಎಲ್ಲಾ ಕವಿತೆಗಳಲ್ಲಿ ಹೆಣ್ಣಿನ ಮೇಲಿನ ಅವರ ಭಾವನೆಗಳು ವ್ಯಕ್ತವಾಗುತ್ತವೆ.

"**ಮೈಸೂರು ಮಲ್ಲಿಗೆ**" **:-** ಯು ಕೆ.ಎಸ್.ನ ರವರ ಪ್ರಥಮ ಕವನ ಸಂಕಲನವಾಗಿದೆ. ಹೆಸರೇ ತಿಳಿಸುವಂತೆ ಮಲ್ಲಿಗೆಯ ಪರಿಮಳವನ್ನು ಕನ್ನಡ ನಾಡಿಗೆ ಹಂಚಿದ ಕವಿ ಗ್ರಾಮೀಣ ಸೊಗಡನ್ನು ಉಣಬಡಿಸಿದವರು. ಗೃಹಲಕ್ಷ್ಮಿ, ಬಾರೆ ನನ್ನ ಶಾರದೆ, ಕಾಮ ದಹನ, ಪಗಡೆ ಆಟ, ಮಾವನ ಮನೆಯಲ್ಲಿ, ಒಬ್ಬಳೇ ಮಗಳು, ಬಿಸಿಲ ಕೋಲು, ಹೆಂಡತಿಯ ಕಾಗದ, ತಂಗಿಯ ಮಾತು, ಕೆರೆಯ ದಾರಿಯಲಿ, ಸಂಗಮ, ಸೀತೆಯ ಪುಣ್ಯ, ಪ್ರೇಮದ ಗುಲಾಬಿಗೆ, ಇರುಳ ದೀಪ, ಬಳೆಗಾರನ ಹಾಡು, ನಾಳೆ ಬರುವಳು ಗೌರಿ, ತೊಟ್ಟಿಲ ಹಾಡು, ಸ್ವಪ್ನ ಸುಂದರಿ, ಬೆಟ್ಟದ ಗೌರಿ, ಎರಡನೇ ಮೆಟ್ಟಿಲು, ಕಂಬನಿ, ವಿರಹಿಣಿ ಈ ಎಲ್ಲಾ ಕವಿತೆಗಳಲ್ಲಿ ಸ್ತ್ರೀಯ ಮನಸ್ಸಿನ ವಿವಿಧ ಮುಖಗಳು ಬಣ್ಣ ಬಣ್ಣವಾಗಿ ಚಿತ್ರಿತವಾಗಿವೆ.

ಮೈಸೂರು ಮಲ್ಲಿಗೆಯ ಸಂಕಲನದ ಅನೇಕ ಗೀತೆಗಳು ಚಲನಚಿತ್ರಕ್ಕೆ ಹಾಡುಗಳಾಗಿ ಪ್ರಸಿದ್ಧಿಯಾಗಿವೆ. ಕನ್ನಡ ನಾಡಿನ ಮನ-ಮನೆಗಳಲ್ಲಿ ವಿಜೃಂಭಿಸಿವೆ.

- "ನನ್ನವಳು ನನ್ನೆದೆಯ ಹೊನ್ನಾಡನ್ನಾಳುವವಳು
  ಬೆಳಗುಗೆನ್ನೆಯ ಚೆನ್ನೆ ನನ್ನ ಮಡದಿ"........ (ಗೃಹಲಕ್ಷ್ಮಿ)
- "ನವಿಲೂರಿನೊಳಗೆಲ್ಲಾ ನೀನೆ ಬಲು ಚೆಲುವೆ
  ಆದಕೆ ನಮ್ಮಿಬ್ಬರಿಗೆ ನಾಳೆಯೇ ಮದುವೆ"........ (ಹಳ್ಳಿಯ ಚೆಲುವೆ)
- "ಮದುವೆಯಾಗಿ ತಿಂಗಳಿಲ್ಲ ನೋಡಿರಣ್ಣ ಹೇಗಿದೆ
  ನಾನು ಕೂಗಿದಾಗಲೆಲ್ಲಾ ಬರುವಳೆನ್ನ ಶಾರದೆ"........ (ತಿಂಗಳಾಯಿತೆ)

- ಪಯಣಿಸುವ ವೇಳೆಯಲಿ ಬಂದು ಆಡಿಗೆರಗಿ
  ಮುಂದೆ ನಿಂದಳು ನನ್ನ ಕೈಹಿಡಿದ ಹುಡುಗಿ........ (ತಿಂಗಳಾಯಿತೆ)
- ನಿನ್ನ ಪ್ರೇಮದ ಪರಿಯ ನಾನರಿಯೆ ಕನಕಾಂಗಿ
  ನಿನ್ನೊಳಿದೆ ನನ್ನ ಮನಸ್ಸು ........ ( - ಗೆ)
- ರಾಯರು ಬಂದರು ಮಾವನ ಮನೆಗೆ ರಾತ್ರಿಯಾಗಿತ್ತು

ಹುಣ್ಣಿಮೆ ಹರಸಿದ ಬಾನಿನ ಬಡುವೆ ಚಂದಿರ ಬಂದಿತ್ತು ........ ಹೀಗೆ ಕವಿ ಕೆ.ಎಸ್.ನ ರವರು ಕನ್ನಡ ಕಾವ್ಯ ಕ್ಷೇತ್ರದಲ್ಲಿ ಒಲವಿನ ಗೀತೆಗಳ ರಚನಾಕಾರರಾಗಿ ಹೊಸ ಸಂಚಲನ ಮೂಡಿಸಿದರು. ವಿವಾಹ ಪೂರ್ವ ಪ್ರೇಮ ಕಾಮಗಳು ನವಿರಾಗಿ ಪ್ರೀತಿಯ, ನಲ್ಮೆಯ ಪಯಣದ ದಾರಿಯಲ್ಲಿ ಹೂ ಹಾಸಿದಂತೆ ಕವನಗಳನ್ನು ಚಿತ್ರಿಸಿದ್ದಾರೆ. ಕವಿಯ ದಾಂಪತ್ಯ, ಪ್ರಣಯ, ಪ್ರೇಮ ನಿವೇದನೆ ಎಲ್ಲವೂ ಸಂಸ್ಕೃತಿಯ ಚೌಕಟ್ಟಿನೊಳಗೆ ಇರಿಸಿ ದಾಂಪತ್ಯ ಪ್ರೇಮಕ್ಕೆ ಹೊಸದಾದ ಸುವರ್ಣ ಚೌಕಟ್ಟನ್ನು ನಿರ್ಮಿಸಿಕೊಟ್ಟಿದ್ದಾರೆ.

ಹೆಣ್ಣು ಪ್ರೇಯಸಿಯಾಗಿ, ಪತ್ನಿಯಾಗಿ ಗಂಡನ ಬಾಳನ್ನು ಬೆಳಗುವ ನಂದಾದೀಪವಾಗಿದ್ದಾಳೆ. ಮಾವನ ಮನೆಯಲ್ಲಿ ಅಳಿಯನಿಗೆ ಸಿಗುವ ಸತ್ಕಾರ ಪತ್ನಿಯ ಪ್ರೀತಿಯ ಕಾಳಜಿ ಎಲ್ಲವೂ ಕವನಗಳಲ್ಲಿ ತುಂಬಿಸಿದ್ದಾರೆ.

- "ಒಬ್ಬಳೆ ಮಗಳೆಂದು ನೀವೇಕೆ ಕೊರಗುವಿರಿ

ಒಬ್ಬಳೆ ಮಡದಿ ಎನಗೆ"....... ಎಂದು ಪತ್ನಿಯ ಮೇಲಿನ ಪ್ರೀತಿಯನ್ನು ಮಾವನಮನೆಯಲ್ಲಿ ತೋರ್ಪಡಿಸಿದ್ದಾರೆ. ಅಕ್ಕರೆಂದನೆಯಾಕೆ, ಸಕ್ಕರೆಯ ನುಡಿಯಾಕೆ, ಸಿಕ್ಕಿದರೆ ಬಿಡದಾಕೆ ಮನೆಯೊಳಿಲ್ಲ ...... ಎಂದು ಪ್ರೇಮಿಸುವ ಹೆಂಡತಿಯ ಪ್ರೀತಿ ಅಕ್ಕರೆಗಳ ನೆನೆದು ಹೆಣ್ತನಕ್ಕೆ ಸೋತದ್ದಾರೆ. ಹೀಗೆ ನೋಡಿದಾಗ ಕೆ.ಎಸ್.ನ ರವರು ಜನತೆಯ ಕವಿ ಎನ್ನುವುದು ಸ್ಪಷ್ಟ.

- "ಕೆಕೆನ್ನೆಯೊಂದು ಮಾಡಿ । ನಗುವ ನನ್ನ ನಿನ್ನ ನೋಡಿ

ಕನ್ನಡಿಯಲಿ ಒಂದು ಜೋಡಿ । ನಕ್ಕು ಬಿಡಲಿ ಒಮ್ಮೆ ನಗು".......ಎಂದು ಕವಿ ತಮ್ಮ ಪತ್ನಯ ಪ್ರೀತಿಯ ಬಗ್ಗೆ ನಕ್ಕುನಗಿಸು ಕವನದಲ್ಲಿ ಹೊಸದಾದ ದಾಂಪತ್ಯಕ್ಕೆ ಕಾಲಿಟ್ಟಿರುವ ಪತಿ ಪತ್ನಿಯರ ಪ್ರೀತಿಯನ್ನು ಎಳೆ ಎಳೆಯಾಗಿ ಚಿತ್ರಿಸಿದ್ದಾರೆ. ಹೀಗೆ ಈ ಮೈಸೂರು ಮಲ್ಲಿಗೆ ಕಾವ್ಯ ಸಂಕಲನ ಕನ್ನಡ ಕಾವ್ಯ ಪ್ರಕಟಣೆಯಲ್ಲಿ ಹೊಸ ದಾಖಲೆಯನ್ನೇ ನಿರ್ಮಿಸಿದೆ. ಇಲ್ಲಿನ ಕವಿತೆಗಳು ಕೋಮಲ ಭಾವನೆಗಳ ಪ್ರೇಮ ಲೋಕವನ್ನು ನಿರ್ಮಿಸುತ್ತವೆ. ಈ ನೆಲದಿಂದಲೇ ಎದ್ದು ಬಂದ ಗಂಡು ಹೆಣ್ಣುಗಳ ಮಿಶ್ರಿತ ಕನಸನ್ನು ತೋರಿಸಿತ್ತವೆ. ಹೆಣ್ಣಿನ ತವರೂರಿನ ಮೇಲಿನ ಪ್ರೀತಿ, ವ್ಯಾಮೋಹ ಪತಿಯ ಮೇಲಿನ ಪ್ರೇಮ, ವಾತ್ಸಲ್ಯ, ಮಮತೆ, ಮಕ್ಕಳಿಗಾಗಿ ಹಂಬಲಿಸುವುದು, ದಾಂಪತ್ಯದ ಹೊಸ ಕನಸುಗಳಲ್ಲಿ ಸ್ತ್ರೀಯ ಉದಯೋನ್ಮುಖ ಪಾತ್ರವಿದೆ. ಹರೆಯದ ದಂಪತಿಗಳ ಪಾತ್ರ ಹೆಣ್ಣಿನ ಮನೋ ಕಾಮನೆಗಳಿಗೆ ಗಂಡಿನ ಸಹಕಾರವಿದೆ.

ಕೆ.ಎಸ್.ನ ರವರು ಗಂಡನ ದೃಷ್ಟಿಯಲ್ಲಿ ಹೆಂಡತಿಯನು ನೋಡಿ ಬರೆದ ಕವನಗಳೆ ಹೆಚ್ಚು. ಸುಖ ಸಂಸಾರದ ಕಲ್ಪನೆಯ ಹೆಣ್ಣಿನ ಚಿತ್ರಣ ನೀಡಿ ಸೌಂದರ್ಯವನ್ನು ಅಶ್ಲೀಲಕ್ಕೆ ಎಡೆಯಿಲ್ಲದೆ ಹೊಗಳಿದ್ದಾರೆ.

• ಕಪ್ಪುಗುರುಳನು ಬೆನ್ನ ಮೇಲೆಲ್ಲ ಹರಡಿದರೆ

ದೂರದ ಗಿರಿಯ ಮೇಲೆ ಇಳಿದಂತೆ ಇರುಳ ಮಾಲೆ...........ಎಂದು ಪತ್ನಿಯ ಕೇಶರಾಶಿಯ ಸೌಂದರ್ಯವನ್ನು ಸೂರೆಗೈದಿದ್ದಾರೆ. ಹೆಣ್ಣು ಒಡವೆ, ವಸ್ತ್ರ, ಅರಿಸಿನ ಕುಂಕುಮ, ಹೂವಿಗೆ ಒಲಿಯುತ್ತಾಳೆ. ಮೈಸೂರು ಮಲ್ಲಿಗೆಯದು ವರ್ಣಮಯ ಪ್ರಪಂಚ. ಪತಿಪತ್ನಿಯರಿಬ್ಬರು ಸಾಕ್ಷಾತ್ ಗಂಧರ್ವ ಲೋಕದವರು. ಪತಿ ಶಿಕ್ಷಣ ಪಡೆದವನು, ಪತ್ನಿ ಹಳ್ಳಿಯ ಮುಗ್ಧ ಚೆಲುವೆ. ಆದರೂ ಅವನನ್ನು ಬೆರಳ ತುದಿಯಲ್ಲೇ ಕುಣಿಸುವವಳು

• ನಿನ್ನ ಪ್ರೀತಿಗೆ ಅದರ ರೀತಿಗೆ । ಕಣ್ಣ ಹನಿಗಳ ಕಾಣಿಕೆ
  ಕಾಲವಳಿಸದ ನೆಲದ ಚೆಲುವಿಗೆ । ನಿನ್ನ ಪ್ರೀತಿಯೇ ಹೋಲಿಕೆ........

• ಕರಗಿರುವುದೆನ್ನೆದೆಯು ಮನ್ನಿಸುವೆನು ಬಾರ
  ಮುಗಿದುದಿಬ್ಬರ ನರಕವಾಸವಿಂದು

ಹತ್ತಿರಕ್ಕೆ ನೀ ಬಾರ । ಮುತ್ತನೊತ್ತುವೆ ಬಾರ ಮನ್ನಿಸಿರುವೆನು ಬಾರ ನಿನ್ನನಿಂದು........ ಎಂದು ಪತಿ-ಪತ್ನಿಯರ ನಡುವಿನ ಮುನಿಸು ಕರಗಿ ಪ್ರೀತಿಯಿಂದ ಪತ್ನಿಯೇ ಹೃದಯವಲ್ಲಭನಾದ ಗಂಡನಿಗೆ ಆಹ್ವಾನವೀಯುತ್ತಿರುವ ಈ ಕಲ್ಪನೆಯಲ್ಲಿ ಸಹಜವಾಗಿ ದಾಂಪತ್ಯ ಪ್ರೇಮವನ್ನು ಕವಿ ಚಿತ್ರಸಿದ್ದಾರೆ.

• ಕೇತಕೆಯ ಬನಗಳಲಿ ಸಂಚರಿಸದಿರು ಚೆಲುವೆ
  ಸರ್ಪ ಮಂದಿರವಂತೆ ಕಂಪಿನೊಡಲು.......

• ನನ್ನಿಂದ ತಡೆಯಿಲ್ಲ, ಬಂದೆನ್ನ ಕರೆದಿಲ್ಲ
  ಹೆಣ್ಣು ಕಾದಿಹುದೆಂದು ನಾನೊಲ್ಲೆನೆಂದಿಲ್ಲ

ಹೆಣ್ಣನೊಲ್ಲೆನು ಎಂಬ ಕಲ್ಲೆದೆಯು ನನಗಿಲ್ಲ.......ಎಂದು ಕವಿ ಒಸಗೆಯಾಯಿತೆ ಗೀತೆಯಲ್ಲಿ ಹೆಣ್ಣಿನ ಮೇಲಿನ ಪ್ರೇಮವನ್ನು ಚಿರನೂತನವಾಗಿ ಬಣ್ಣಿಸಿದ್ದಾರೆ. ಮೊದಲೆ ರತಿ ನೀನಲ್ಲ, ಮನ್ಮಥನು ನಾನೆ ಅಲ್ಲ ಹಂಗು ಹೊಣೆ ಇಲ್ಲದೆಯೇ ಪ್ರೀತಿಯಲಿ ನಲಿವ ಬಾರೆ....... ಎಂದು ಗಂಡ ಹೆಂಡತಿಯ ರೂಪ ಎಂದಿಗು ಪ್ರೀತಿಗೆ ಅಡ್ಡಿ ಇಲ್ಲ, ಹೆಣ್ಣಿಗೆ ಪ್ರೀತಿಯ ಕಾಣಿಕೆ ಬೇಕು ಒಡವೆಯೇ ಬೇಕಿಲ್ಲ. ಹೆಣ್ಣಿನ ಪ್ರೀತಿ ಅನುರಾಗಗಳೇ ಜೀವನಕ್ಕೆ ಸಾಕೆಂದಿದ್ದಾರೆ.

• ಮುಂದೆ ಯಾವ ಕಾಲದಲ್ಲೋ । ಎಲ್ಲೋ ನಿನ್ನ ನೋಡುವಾಗ

ಕಣ್ಣಲಿ ಹನಿ ಬರುವುದಾಗ...... ಎಂದು ಕಂಬನಿ ಕವಿತೆಯಲ್ಲಿ ಹೆಂಡತಿ ದೂರ ಹೋದಾಗ ಆಗುವ ಯಾತನೆಯನ್ನು ಬರೆದಿದ್ದಾರೆ. ಪ್ರೇಯಸಿ, ಪತ್ನಿ, ವರಹದ ನೋವನ್ನು ತಮ್ಮ ಕವನಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಒಟ್ಟಾರೆ ಕೆ.ಎಸ್.ನ ರವರ ಮೈಸೂರು ಮಲ್ಲಿಗೆಯ ಕವನಗಳನ್ನು ವಿಮರ್ಶಿಸಿದಾಗ ಹೊಳೆವ ಸತ್ಯಾಂಶವೇ ಸಾತ್ವಿಕವಾದ, ನಿಷ್ಕಲ್ಮಷವಾದ ದಾಂಪತ್ಯ ಪ್ರೇಮ. ಕನಕಾಚಲದಂತೆ ಅಚ್ಚಳಿಯದ ಸುಂದರ ಪ್ರೇಮ ಮೂರ್ತಿಗಳ ನಡುವಿನ ಸರಸ; ವಿರಸ ಕಾಣ್ಕೆ, ಹೃದಯಸ್ಪರ್ಶಿ ಮಾತುಗಳಿಂದ ಒದುಗರ ಮನ ತಣಿಸಿ ಆ ಮೂಲಕ ಈ ಸೃಷ್ಟಿಯ ನಿಜವಾದ ಅವಿಭಾಜ್ಯ ಅಂಗವೆಂದರೆ ಅದು ಹೆಣ್ಣು, ಅವಳ ಪ್ರೀತಿಯೇ ಸಮಾಜಕ್ಕೆ ಅಭ್ಯುದಯವಾಗಿದೆ ಎಂದು ತಿಳಿಯಬಹುದು.

ಐರಾವತ: ಕೆ.ಎಸ್.ನ ರವರ ಎರಡನೇ ಕವನ ಸಂಕಲನವಾಗಿದ್ದು ಇದರಲ್ಲಿ 18 ಕವನ ಸಂಕಲನಗಳಿವೆ. ಕಲ್ಪನಾ ಸುಂದರಿ, ನೀವಲ್ಲವೇ, ಅವಳೇ ಇವಳು, ಗಂಡ ಹೆಂಡತಿ, ತಂದೆ ಬರೆದರು ಮಗಳಿಗೊಂದು ಕಾಗದವನ್ನು, ಸುದರ್ಶನ, ಮಳೆಯೊಳಗೆ

ಮನೆಗೆ ಬಂದಳು, ಬಿಂದಿಗೆಯ ಬಾಲೆಗೆ, ರತ್ನಾಲು ಕಾಮಾಕ್ಷಿ, ಕಾಮನ ಕಥೆ(ಪೂರ್ವ ಕಾಂಡ ಉತ್ತರ ಕಾಂಡ) ಈ ಕವನಗಳಲ್ಲಿ ಸ್ತ್ರೀ ಕಲ್ಪನೆ ವಿಶಿಷ್ಟವಾಗಿದೆ.

- ಅಡಿಯ ಮುಟ್ಟ ನೀಳ ಜಡೆ । ಮುಡಿಯ ತುಂಬ ಹೂವು ಹೆಡೆ
  ಇವಳು ಅಡಿಯನಿಟ್ಟ ಕಡೆ । ಹೆಜ್ಜೆ ಹೆಜ್ಜೆಗೂ ಒಂದು ದೊಡ್ಡ ಮಲ್ಲಿಗೆ.....(ಕಲ್ಪನಾ ಸುಂದರಿ)
- ಹತ್ತು ವರುಷದ ಹಿಂದೆ ಮುತ್ತೂರ ತೇರಿನಲಿ
  ಅತ್ತತ್ತ ಸುಳಿದವರು ನೀವಲ್ಲವೇ ?
  ಹತ್ತಿರದ ಹೆಣ್ಣೆಂದು ಮತ್ತೆ ಮುತ್ತೂರಿನಲಿ
  ಒಪ್ಪಿ ಕೈ ಹಿಡಿದವರು ನೀವಲ್ಲವೇ.....(ನೀವಲ್ಲವೇ)
- ಹೇಮಗಿರಿ ಜಾತ್ರೆಯಲಿ ಹೇಮನದಿಯಂಚಿನಲಿ
  ಬೆಳದಿಂಗಳುಟದಲಿ ಸುಳಿದವಳ್ಯಾರು ?
  ಆ ಹುಡುಗಿ ಹೊಸ ಹುಡುಗಿ ಯಾರವಳು ? ನಮಗಂದು
  ಸುಖದೂಟವಿತ್ತು ಯಾರಾದಾರೇನವಳು.....(ಅವಳೆ ಇವಳು)
- ಹೆಂಡತಿಯೊಬ್ಬಳು ಮನೆಯೊಳಗಿದ್ದರೆ
  ನನಗದೆ ಕೋಟಿ ರೂಪಾಯಿ
  ಹೆಂಡತಿಯೊಬ್ಬಳು ಹತ್ತಿರವಿದ್ದರೆ
  ನಾನು ಒಬ್ಬ ಸಿಪಾಯಿ.....(ಗಂಡ-ಹೆಂಡತಿ)

ಹೀಗೆ ಕೆ.ಎಸ್.ನ ರವರು ತಮ್ಮ ದಾಂಪತ್ಯ ಗೀತೆಗಳಲ್ಲಿ ಗಂಡ-ಹೆಂಡತಿಯ, ಪ್ರೇಯಸಿಯ, ಪ್ರಿಯತಮೆಯ ಅಪಾರ ಪ್ರೀತಿಯ ಆಳಕ್ಕೆ ಹೊಕ್ಕಿ ಸ್ತ್ರೀಯ ಸೌಂದರ್ಯ ಮತ್ತು ಪ್ರೇಮವನ್ನು ಅಪೂರ್ವವಾಗಿ ಚಿತ್ರಿಸಿದ್ದಾರೆ. ಕವಿಗೆ ಹೆಂಡತಿಯೊಬ್ಬಳು ಮನೆಯಲ್ಲೆ ಹತ್ತಿರದಲ್ಲಿದ್ದರೆ ಅದೇ ಕೋಟಿ ರೂಪಾಯಿಗೆ ಸಮ ಎಂದು ತುಂಬಾ ಸಂತೋಷದಿಂದ ಹಾಡಿದ್ದಾರೆ. ಪ್ರಸ್ತುತ ಸಮಾಜದಲ್ಲಿ ಇದರ ಅನ್ವಯ ಅಪಾರವಾದರೆ ಪ್ರೀತಿಯ ಸುಧೆ ಎಲ್ಲೆಲ್ಲು ಹರಿಯುವುದರಲ್ಲಿ ಸಂಶಯವಿಲ್ಲ.

- ಹೊತ್ತವಳು, ಹೆತ್ತವಳು ತಾಯಿ ಎನ್ನುವ ಜೀವ
  ಹತ್ತುಸಲ ನಿನ್ನ ಹೆಸರೆತ್ತದಿಹ ದಿನವಿಲ್ಲ
  ಒಬ್ಬಳನೆ ಕರೆದಿಲ್ಲ ಇಬ್ಬರೂ ಬನ್ನಿ
  ಹಬ್ಬದಲಿ ಬಂದೆಮಗೆ ಹಬ್ಬವನು ತನ್ನಿ.....(ತಂದೆ ಬರೆದರು ಮಗಳಿಗೊಂದು ಕಾಗದವನು)
- ಎರಡು ಚಕ್ರದ ಮೇಲೆ ಮೂರನೆಯ ಶ್ರೀ ಚಕ್ರ
  ಬಳಸದಿಹ ಬೀದಿಯುಂಟೆ ಬಿಸಿಲಿಳಿದ ಮೇಲೆ
  ಮೆಲ್ಲಗೆ ಬಂದು ಮಹರಾಯ ಮೆರೆಯುವರು ಕಣ್ಣ ಮುಂದೆ.....(ಸುದರ್ಶನ) ಎಂದು

ಕವನದಲ್ಲಿ ಮನೆಯಿಂದ ಹೊರ ಹೋಗಿರುವ ಗಂಡನ ನೆನೆದು ಹಂಬಲಿಸುವ ಹೆಂಡತಿಯ ಚಿತ್ರಣವಿದೆ. ಪ್ರೀತಿಗಾಗಿ ಹಂಬಲವಿದೆ. ಕನವರಿಕೆ ಇದೆ.

"ದೀಪದ ಮಲ್ಲಿ" :– ಕವನ ಸಂಕಲನಕ್ಕೆ ಬರುವ ಹೊತ್ತಿಗೆ ಸಾಕಷ್ಟು ಬದಲಾವಣೆಯಾಗಿದೆ ಅದಕ್ಕೆ ಸಾಕ್ಷಿ ಅನ್ನಪೂರ್ಣೆಗೆ ಕವನದ ವಸ್ತು ಉದ್ದೇಶಗಳು ಬಿನ್ನವೆನಿಸಿದರಿಂದ ಅಭಿವ್ಯಕ್ತಿ ಮಾತ್ರ ಹಿಂದಿನ ಕವಿತೆಗಳನ್ನೆ ಅನಿಸರಿಸಿದೆ .ಕೆ.ಎಸ್. ನರವರ ಬಹುತೇಕ ಕವಿತೆಗಳು ಸ್ತ್ರಿಯ ಮೆದುಭಾವದ ಅಭಿವ್ಯಕ್ತಿಯಾಗಿದೆ.

ಹೆಣ್ಣು, ಸುಖದಾಂಪತ್ಯ ಗಂಡಿನ ನಿಲುಗಳೆ ಇಲ್ಲಿ ಮೇಲುಗೈ. ನಿಮ್ಮ ಸಂಸಾರವಿದು ಎಂಬ ಕವನದಲ್ಲಿ ಸಂಸಾರದ ಹೊಣೆಯನ್ನೆಲ್ಲಾ ಹೆಣ್ಣು ಹೊರಬೇಕಾಗಿ ಬಂದು ಅದರಿಂದ ತಪ್ಪಿಸಿಕೊಳ್ಳಲು ಯತ್ನಿಸುವ ಗಂಡಿನ ವಿರುದ್ದ ಸಣ್ಣ ಪ್ರತಿಭಟನೆ ಇದೆ. ಸಂಸಾರದೊಳಗಿನ ಹೆಣ್ಣಿನ ಶೋಷಣೆಯು ಇಲ್ಲಿ ಸಿಗಿತ್ತದೆ. ಇಲ್ಲಿ ಆಕೆ ತನ್ನ ಮತ್ತು ಆತನ ನಮ್ಮ ಸಂಸಾರವಾಗಬೇಕೆಂದು ಆಶಿಸಿದ್ದಾಳೆ.

- " ಬಿಡಿಬಿಡಿರಿ ಎಂತಾ ಮಾತಿದು ನಮ್ಮ ಸಂಸಾರ
  ಎಂದಿಂದಿಗೂ ನಿಮ್ಮದಾಗಿ ಅದರಂಚಿನಲ್ಲಿ
  ಕಟ್ಟಿಹೆನು ಒಂದು ತೊಟ್ಟಿಲನು
- ಹತ್ತಾರು ವರುಷ ಸಂಸಾರ ಮಾಡಿದ ಮೇಲೆ
  ಏನಿದೀ ಹಗಲ ಸನ್ಯಾಸ ? ಹತ್ತಿರ ಬಂದು
  ಆಡಿದ್ದು ತಪ್ಪು ಮಾತೆಂದು ಕಂದನ ತುಟಿಗೆ
  ಮುತ್ತಿಟ್ಟು ಎದ್ದು ಹೋಗಿರಿ ಸಾಕು ಈ ಮಾತು
  ಹೆಣ್ಣ ಕಣ್ಣೀರಿನಲ್ಲಿ ಮನೆ ಮಾರು ತೆಪ್ಪತೇಲಿತು"................

ಹೀಗೆ ಕವಿ ಹೆಣ್ಣಿನ ಮನಸ್ಸಿನ ಅಂತರಾಳವನ್ನು ಕಂದನನ್ನು ಸಾಕ್ಷಿಯಾಗಿಟ್ಟುಕೊಂಡು ಅವಳ ಹೇಳುವ ಮಾತು ವಿಷಾದ ತುಂಬಿರುವಂತೆ ಮಾಡಿದ್ದಾರೆ. ಇಲ್ಲಿ ಸಂಸಾರವನ್ನು ತಿದ್ದಬೇಕೆಂಬ ಅಚಲ ನಿರ್ಧಾರವಿದೆ. ಈ ಕವನ ಸ್ತ್ರಿವಾದಿ ನೆಲೆಯಿಂದ ಯೋಚಿಸಬೇಕಾದ ಪ್ರಗತಿಪರವಾದ ಆಶಯ ಹೊಂದಿದೆ.

ದೀಪದ ಮಲ್ಲಿ,
ಅಪಾರಾದಿ,
ಅರಸಿಕೆರೆಯಲ್ಲಿ,
ಭೂಮಿಗೀತ,
ಹೀಗಾಯಿತು,
ಸೀತೆಯ ಸಂದೇಶ,
ತುಂಗಾಭದ್ರ,
ಮುರಿದ ಹಾಡು,
ಎಂದು ಬರುವೆ ನೀನು?
ಹೃದಯ ಮೋಹಿನಿಗೆ,
ನಿರೀಕ್ಷೆ,
ಉಮಾ,
ನೀ ಬರುವ ದಾರಿಯಲ್ಲಿ,
ನಿಲ್ಲಿಸದಿರೆನ್ನ ಪಯಣವನು,
ನಿಮ್ಮ ಸಂಸಾರ,
ಇದು ಹಾಡು– ನೋವು,
ಸಂಪಾದಕರಿಗೆ,
ಮಲ್ಪಿಯಲ್ಲಿ,
ಅಂತಿಂತ ಹೆಣ್ಣು ನೀನಲ್ಲ,
ಪಂಡಿತರ ಮಂಚ,
ಕಣ್ಣೆತ್ತಿ ನೋಡಿದಳು ಚಂದಿರನ ತನಕ,
ನೀನರಿಯದಿರಬಹುದು,
ಸಂಬಳದ ಸಂಜೆ,
ಮಿಂಚುತಾರೆ,

ಅಕ್ಕ–ತಂಗಿಯರ ಹಾಡು,.....ಹೀಗೆ ಎಲ್ಲಾ ಕವನಗಳಲ್ಲಿಯೂ ಕವಿ ಕೆ.ಎಸ್.ನರವರು ಸ್ತ್ರಿ ಸಂವೇದನೆಯನ್ನು ವೈವಿದ್ಯಪೂರ್ಣವಾಗಿ ಚಿತ್ರಿಸಿದ್ದಾರೆ. ಈ ಎಲ್ಲಾ ಕವನಗಳಲ್ಲಿಯೂ ಹೆಣ್ಣಿನ ನಿತಂತರ ಜೀವನ ಪಯಣವನ್ನು ಮಧುರಾತಿ ಮಧುರವಾಗಿ ವರ್ಣಿಸಿದ್ದಾರೆ.

- " ಯಾರೋ ನನ್ನವರಂತೆ ನನ್ನ ಸ್ನೇಹಿತರಂತೆ
  ಬಂದಿದ್ದರಂತೆ ಸಂಜೆಯಲಿ ನನ್ನ ಬಲ್ಲವರಂತೆ
  ನನ್ನ ಕೇಳಿದರಂತೆ ಇಲ್ಲ ಎಂದಟ್ಟಿದಳು ಗೌರಿ"......... ಎಂದು ಕವಿ ವಿಶೇಷವಾಗಿ ಈ

ಕವನ ಅನುಭವಕೊಡುವಂತೆ ಮಾಡಿದ್ದಾರೆ. ಯಾರಾದರೂ ಮನೆಗೆ ಬಂದು ಹೋಗುವುದು ವಾಡಿಕೆ. ಗಂಡ ಬಂದಮೇಲೆ ಹೆಂಡತಿ ಆ ಕುರಿತು ಮಾಹಿತಿ ನೀಡುವುದು ಹೊಸದಲ್ಲ. ಹೆಂಡತಿಯ ತಣ್ಣನೆಯ ಮನಸ್ಸು, ಗಂಡನ ವ್ಯಗ್ರ ಮನಸ್ಸು ಈ ಎರಡರ ವೈದೃಶ್ಯದಲ್ಲಿ ಅಭಿವ್ಯಕ್ತಿ ಪಡೆಯುವ ಕವನ ಕಥನಾತ್ಮಕವಾಗಿದೆ. ಸಂವಾದ ಚಾತುರ್ಯವು ತುಂಬಿದೆ. ಮತ್ತೆ ಮತ್ತೆ

ಹೆಂಡತಿಯನ್ನು ಕೆದಕಿ ಕೇಳಿ ಹತಾಶನಾಗುವ ಗಂಡನ ಚಿತ್ರವಿದೆ. ಅವಳು ಮರಳಿ ಮರಳಿ ಉತ್ತರಿಸಿ ಸಾಕಗುವಳು, ಇನ್ನೂ ತಾನು ಉತ್ತರಿಸಲಾರ ಬಂದವರನ್ನ ಮತ್ತೆ ಬಂದಾಗ ಕೇಳಿ ಎಂದು ತಾಕಿತು ಮಾಡುತ್ತಾಳೆ

- " ಕಂಡ ಹೆಣ್ಣಿನ ಮೇಲೆ ಕಣ್ಣೀಡದೆ ತೊಲಗೆಂದು
  ಬೆದರಿಸಿದ ಬಂಗಾರಿ ನಿನಲ್ಲ
  ನಡೆದ ದಿಕ್ಕಿಗೆ ನಿಂತ ನಿನ್ನನ್ನು ಕಂಡು
  ಕಣ್ಣ ತೇಲಿಸಿದವಳು ನಾನಲ್ಲ"...............(ಅಕ್ಕ-ತಂಗಿಯರ ಹಾಡು )

ಕವಿ ವಿಶೇಷವಾಗಿ ಹೆಣ್ಣು ಮಗಳು ತನ್ನ ಚಲುವನ ಗುಣಗಾನವನ್ನು ಮಾಡಿತ್ತಾ ಅಕ್ಕ-ತಂಗಿಯರೆ ಪರಸ್ಪರ ಇಬ್ಬರು ತಮ್ಮ ಗುಣನಡೆತೆಗಳ ವಿಶ್ಲೇಶಣೆಯಲ್ಲಿ ತೊಡಗಿರುವುದು ನಿಜಕ್ಕೂ ರಂಜನಿಯವಾಗಿದೆ. ಇಲ್ಲಿ ಕವನದ ಆಶಯ ಪೂರ್ಣ ನವ್ಯವಾಗಿಲ್ಲ ಎಂಬುದು ತನಗೆ ತಾನೆ ಹೊಳೆಯುವುದು.

- " ಬಳಿಗೆ ಬಾರದಿರೆಂದು ಬೆಂಡೋಲೆ ಬೆದರಿಸಿತು
  ಬೇಸಿರಿಯ ಮುತ್ತು ಬೇಸರಗೊಂಡು ಮಲಗಿಹಳು
  ಮುಡಿದ ಮಲ್ಲಿಗೆಯೊಂದೆ ನೊಂದಂತೆ ಮೆಲ್ಲಗೆ
  ನಿನ್ನಿಷ್ಟವೆಂದು ಬೆಳ್ಳಗೆ ನಕ್ಕೂ ವಿರಮಿಸಿತು".......... (ಉಮಾ)

ವಿಶೇಷವಾಗಿ ಈ ಕವನದಲ್ಲಿ ಕವಿ ಪತ್ನಿಯೇ ಸಾಕ್ಷಾತ್ ದೇವಿ ಸ್ವರೂಪ, ಅವಳ ಅಲಂಕಾರಿಕ ತೊಟ್ಟಿರುವ ವಸ್ತುಗಳೆ ಗಂಡನಿಗೆ ಹೆದರಿಸುವಂತಹ ಶಕ್ತಿ ಪಡೆದಿರುವಾಗ ಆಕೆಯಾ ಶಕ್ತಿ ಆಪಾರ ಎಂದು ತಿಳಿಸಿ ಬೆಂಡೋಲೆ, ಮಲ್ಲಿಗೆ, ಮುತ್ತುಗಳ, ಉಪಮೆಗಳು ನಿಜಕ್ಕೂ ಅರ್ಥಪೂರ್ಣವಾಗಿವೆ.

**"ಉಂಗುರ":-** ಈ ಕವನ ಸಂಕಲನದಲ್ಲಿಯೂ ಸ್ತ್ರಿಯ, ಪತ್ನಿಯ, ಪ್ರೇಯಸಿಯ, ಗೆಳತಿಯ, ಬದುಕಿನ ವಿವಿಧ ಮಜಲುಗಳನ್ನು ನವಿರಾಗಿ ವರ್ಣಿಸಿದ್ದಾರೆ.

| | |
|---|---|
| ಉಂಗುರ, | ಮನೆಗೆ ಬಂದ ಹೆಣ್ಣು |
| ಕಾಮನಬಿಲ್ಲು | ಮೈಕಾಲಬೆಟ್ಟದ ಹಾಡುಗಳಿಂದ |
| ಮಣಿಯಮ್ಮನ ಮದುವೆ | ಚಿತ್ರವಳ್ಳಿಯ ಚಲುವೆಯರು |
| ಗಾನಮಂದಿರದಲ್ಲಿ ಕಡೆಯ ಮಾತು | ಒಲುಮೆ ಒಲಿದೆ ಬರುವುದು |
| ಮುನಿಯದಿರು ಮಾನಿನಿಯೇ | ನಿನ್ನೋಲವಿಗೂ |
| ಮೇರೆಯಿಹುದು | ಬೆಚ್ಚಗಿದೆ ಹಚ್ಚ ಹಸುವಿನ ಹಾಲು ಒಳೆಯಲು |
| ಕಣ್ಣಾವುದು | ಬೆಚ್ಚಗಿದೆ ಹಚ್ಚ ಹಸುವಿನ ಹಾಲುಬಳಲೆಯಲಿ |

ಹೀಗೆ ಕವಿ ಹೆಣ್ಣಿನ ಮನೋಕಾಮನೆಗಳನ್ನು, ಪುರುಷನ ಪ್ರೀತಿ ವೈರಾಗ್ಯ, ಸಂಸಾರದೊಳಗಿನ ನೋವು ನಲಿವುಗಳು ಅದರಲ್ಲಿ ಹೆಣ್ಣಿನ ಪಾತ್ರ ಎಲ್ಲವನ್ನು ವೈಭವಿಕರಿಸಿ ಓದುಗರಿಗೆ ಮನಮುಟ್ಟುವಂತೆ ಕಟ್ಟಿಕೊಟ್ಟಿದ್ದಾರೆ.

- " ಆರೇಳು ವರುಷ ಸಂಸಾರ ಒಟ್ಟಿಗೆ ನಡೆದು
  ತೆಪ್ಪ ನಡುಹೊಳೆಗೆಬಂದಿಹುದು ಇಂದೇನಿವಳು
  ಬೇರೆ ಬೀದಿಯಲ್ಲಿ ಬೇರೊಂದು ಮನೆಯನ್ನು ಹುಡುಕಿ
  ಸಾಗಿಸಿರಿ ಪಾತ್ರೆ ಪರಟಿಯನು ನಿಲ್ಲೇನಿ ಇಲ್ಲಿ"............ಎಂದು

ಚಂಡಿಹಿಡಿಯುತ್ತಿರುವ ಹೆಂಡತಿಯ ಬಗ್ಗೆ, ಸಂಸಾರ ತಾಪತ್ರಯದ ಬಗ್ಗೆ ಕವಿ ಚಿತ್ರಿಸಿದ್ದಾರೆ. ಸಂಸಾರವೆಂದರೆ ಅದೊಂದು ನಿಜವಾದ ರಾಜ್ಯಾಂಗವೆ ಹಾಗಿದೆ ಎಂದಿದ್ದಾರೆ ತನ್ನ ತಮ್ಮನ ಹೆಂಡಿತಿ ಬೇರೊಂದು ಮನೆ ನೋಡಿದರೆ ಇವಳು ಹಿಡಿಸುತ್ತಿರುವುದು ತಮ್ಮನ ಪರಮ ಜ್ಞಾನತ್ವ, ತನ್ನ ತಾಯಿ ಇಂತಹ ಇಬ್ಬರು ಸೊಸೆಯರನ್ನು ಒಂದೆ ಮನೆಯಲ್ಲಿ ಬಾಳಿಸುವೇನೆಂದು ತಿಳಿದಿರುವುದು ,ಹಿರಿಯಳಾದ ಆಕೆಯ ಮನಸ್ಸು ಮೆನಯೊಡೆಯಲು ಒಪ್ಪದಿರುವುದು. ಮನೆ ಹೊಲಗಳು ಹಿರಿಯರ ಆಸ್ತಿ ಅವನೆಂದೂ ಪಾಲಗಾಲು ಬಿಡನೆಂದು ಹೇಳುತ್ತಿರುದು. ಆಸೆಬುರುಕ ರಕ್ಕಸಿಯಾರಾದ ಈ

ಸೊಸೆಯಿಂಗೆ ಹಂಚುವುದಿಲ್ಲವೆಂದು ಕೊರಗುತ್ತಿದ್ದಾಳೆ. ಈ ರಣರಂಗದಲ್ಲಿ ಪೇಚಾಡುತ್ತಿರುವುದು ಮನೆಗೆ ಹಿರಿಯ ಮಗನ ಮತ್ತು ಗಂಡನ ಸ್ಥಾನದಲ್ಲಿರುವುದರಿಂದ ಇಬ್ಬರ ಮಧ್ಯಯು ಅಡಕೆಯಂತೆ ಸಿಕ್ಕಿಹಾಕಿಕೊಂಡಿರುವುದರ ನೋವಿನ ಎಳೆಯನ್ನು ತಿಳಿಸಿ ಹೆಣ್ಣು ಹೇಗೆ ಮನೆಯ ಆಗು ಹೋಗುಗಳಿಗೆ ಪ್ರತಿ ಸ್ಪಂದಿಸುತ್ತಾಳೆ ಅವಳ ಸಂವೇದನೆಗಳ ತಾಕಲಾಟಗಳ ಬಗ್ಗೆ ಚಿತ್ರಿಸಿದ್ದಾರೆ.

- **" ಯವ್ವನದ ಬಲಿತ ಕಣ್ಣುಗಳ ತೆರದು ನೋಡೆನ್ನಾ**  
  **ಚಳಿ ಹಗಲ ತುಂಬ ಬನವೆಲ್ಲಾ ಹೂಗಳ ತೊಟ್ಟು**  
  **ಬೆಟ್ಟದೆದೆಯಿಂದ ಬೀಸುವ ಗಾಳಿ ಅಬ್ಬರಿಸಿ**  
  **ಯವ್ವನದ ಬಲಿತ ಕಣ್ಣುಗಳ ತೆರದು ನೀನೆನ್ನ**  
  **ಗೆದ್ದವನು ಬಾರೆನ್ನಾ ದೊರೆಯೆ"**..................ಕವಿ ಕೆ.ಎಸ್.ನರವರು ಇಲ್ಲಿ

ಯವ್ವನಭರಿತ ತರುಣಿಯು ತನ್ನ ಪ್ರೀಯಕರನನ್ನು ಮನಸಾರೆನ ಸ್ವೀಕರಿಸಲು ಕಾತರದಿಮದ ಕಾಯುತ್ತಿರುವ ಹಂಬಲವಿದೆ. ಅವನೆ ಅವಳ ದೊರೆ. ತನ್ನ ಪರೀಕ್ಷೆಗಳಿಂದ ಗೆದ್ದು ಬಂದವನೆ ನನ್ನ ಗಂಡ ಎಂದು ಹಂಬಲಿಸಿದ್ದಾಳೆ.

- **" ಮೊದಲದಿನ ಮೌನ ಅಳುವೆ ತುಟಿಗೆ ಬಂದಂತೆ**  
  **ಚಿಂತೆ ಬಿಡಿ ಹೂವ ಮುಡಿದಂತೆ**  
  **ಹತ್ತುಕಡೆ ಕಣ್ಣು ಸಣ್ಣಗೆ ದೀಪ ಉರಿದಂತೆ**  
  **ಜೀವದಲಿ ಜಾತ್ರೆ ಮುಗುದಂತೆ"**............( ಮನೆಗೆ ಬಂದ ಹೆಣ್ಣು )

ಈ ಕವನದಲ್ಲಿ ಕವಿ ಹೊಸದಾಗಿ ಮದುವೆಯಾಗಿ ಗಂಡನಮನೆಗೆ ಬಂದ ಹೆಣ್ಣು ಮೊದಲ ದಿನ ಪತಿಯ ಗೃಹಕ್ಕೆ ಗೃಹಿಣಿಯಾಗಿ ಕಾಲಿಟ್ಟ ದಿನ ತನ್ನ ತವರನ್ನು ಬಿಟ್ಟು ಬಂದು ತನ್ನ ಸರ್ವಸ್ವವೇ ಗಂಡ ಎಂದು ನಂಬಿ ಬಂದಿರುವಾಗ ಮೌನವೇ ತುಂಬಿ ಅಳು ನುಗ್ಗಿ ಚಿಂತೆ ದುಃಖಗಳ ಸರಮಾಲೆ ಹಾಸಿದಂತೆ ಅವಳಿಗೆ ಹೊಸಪರಿಸರ ವಾತಾವರಣ ವಿಸ್ಮಯತೆ ತಂದಿದೆ. ಮುಂದೆನು ಎಂಬ ಚಿಂತೆ ನವ ವಧುವಾದ ಪತ್ನಿಗೆ ಬಂದಿರುವುದರ ಸೂಚನೆ ಇಲ್ಲಿದೆ.

ಎರಡನೆ ದಿನ ನಗು ತುಂಬಿದೆ, ಮೂಗುತ್ತಿ ಮಿಂಚುಹೊಳೆದಿದೆ, ನೀರೋಳಗೆ ವೀಣೆ ಮಿಡಿದಂತೆ ಹಾಡಿದ ಮಾತುಗಳು ಬರುತ್ತಿವೆ. ಮೂರನೆಯ ಸಂಜೆ ತಲೆ ತುಂಬ ಹೂ ಮುಡಿದಿ ಹೂವಿಗೂ ಜೀವ ತಂದಿದ್ದಾಳೆ, ಹುಣ್ಣಿಮೆ ಹಾಲಾಗಿ ಹರಿದಂತೆ ಹೊಸ ವಧುವಿನ ಶೃಂಗಾರ, ಪ್ರೀತಿ, ಒಡನಾಟದ ಬಗ್ಗೆ ಸ್ತ್ರೀತನ ರಂಗೇರಿರುವುದನ್ನು ಕಲ್ಪಿಸಿದ್ದಾರೆ.

- **" ಕಣ್ಣು ಹಾಯುವ ಹೆಣ್ಣು ಮಾಲತಿ, ಸರಸ್ವತಿಯೊ ದೇವತೆ**  
  **ಸೀತೆಯ ಸೀಮೆಯ ಜಾಣೆ, ರಮೆಯೋ ಸಭೆಗಳಲ್ಲಿ ಸಂಭಾವಿತೆ**  
  **ಪರಮ ಸುಂದರಿ ಪುಣ್ಯಮಂಜರಿ ಇನಿದನಿಯ ಭಾಗೀರತಿ**  
  **ನನಗೆ ಇವರೋಳಗೆಲ್ಲ ಮೆಚ್ಚಿನ ಪಚ್ಚೆಯುಂಗುರ ಪಾರ್ವತಿ"**.......... ಕವಿ

ಚಿತ್ರವಳ್ಳಿಯ ಚಲುವೆಯರು ಕವನದಲ್ಲಿ ಯಾರೋ ದಿಲ್ಲಿ ಮೂಲದ ರಮಣಿಯರು ಹಳ್ಳಿಗೆ ಬಂದು ನೆಲೆಸಿದವರು ಸುತ್ತೆಲ್ಲಾ ಹಳ್ಳಿಗರ ಕಣ್ಣಿಗೆ ಭೂ ಲೋಕಕ್ಕೆ ಇಳಿದ ಅಪ್ಸರೆಯರಂತೆ ಕಂಗೊಳಿಸುತ್ತಿದ್ದಾರೆ. ಅವರು ಲಕ್ಷ್ಮಿ, ಸರಸ್ವತಿ, ಸೀತೆಯರಂತೆ ಉಜ್ವಲವಾಗಿದ್ದಾರೆ. ಅವರ ಹೆಸರುಗಳು ಮಾಲತಿ, ರಮೆ, ಭಾಗೀರತಿ ಅವರೊಳಗೆಲ್ಲಾ ಪಚ್ಚೆಯುಂಗುರದ ಪಾರ್ವತಿ ಇಷ್ಟ ಎಂದು ಸೌಂದರ್ಯಕ್ಕೆ ಮಾರು ಹೋಗಿರುವುದರ ಕವಿ ಕಲ್ಪನೆ ಸುಂದರವಾಗಿದೆ.

- **" ನಿನ್ನ ಚಲುವಿಗೆ ಮೇರೆ ನೀನೆ**  
  **ಬಳಿಯಲ್ಲಿದ್ದು ಬೇರೆ ನಾನೆ**  
  **ಬಾನಮೇರೆ ಬಾನೆ ತಾನೆ**  
  **ನಿನ್ನೊಲವಿಗೂ ಮೇರೆ ಇರುವುದು**.........(ನಿನ್ನೊಲವಿಗೂ ಮೇರೆ ಇರುವುದು)

ಈ ಕವನದಲ್ಲಿ ಕವಿ ಹೆಣ್ಣಿನ / ಪತ್ನಿಯ / ಚಲುವೆಯ ಪ್ರೀತಿಯೆಂಬುದಕ್ಕೂ ಒಂದು ಮೇರೆ ಇರುತ್ತದೆ ಎಂಬ ಸತ್ಯ ನುಡಿದಿದ್ದಾರೆ. ಆಕೆಯೆ ತಾವು ಕಂಡ ಮೊದಲ ಹೆಣ್ಣಾಗಿ, ಮಡದಿಯಾಗಿ ಅವಳ ರೂಪು, ಲಾವಣ್ಯ, ಚಲುವು,

ಬಯಕೆಗಳನ್ನೆಲ್ಲ ಪತ್ನಿಗೆ ಅರ್ಪಿಸಿದರು ಎಲ್ಲೋ ಒಂದು ಕಡೆ ಅವಳ ಪ್ರೀತಿಗೆ ವಾತ್ಸಲ್ಯಕ್ಕೆ ಒಂದು ಗಡಿ. ಎಲ್ಲೆ. ಮೇರೆ. ಇದ್ದೇಇದೆ ಎಂದು ಕವಿ ಹೆಣ್ಣಿನ ಭಾವನೆಗಳಿಗೆ ಬೆಲೆ ನೀಡಿದ್ದಾರೆ.

- " ಬಾಳಿಗಂತೂ ಸಾವೆ ಕೊನೆಯೆ?
  ಅದರಾಚೆಗು ನಿನ್ನ ಒಲವೆ?
  ಒಲವು ತಾನೆ ತನಗೆ ಮೇರೆ
  ಒಲವಿಗಂತು ಮೇರೆ ಇರದು"......... ಎಂದು ಕವಿ ಪತ್ನಿಯಪ್ರೀತಿ ಬದುಕು, ಸಾವು

ಅದರಾಚೆಗೂ ಇರುತ್ತದೆ. ಅದಕ್ಕೆ ಕೊನೆಯೆಂಬುದಿಲ್ಲ. ಒಲವು ಚಿರನೂತನ ಎಂದು ಬಾನೆತ್ತರದಾಚೆಗೂ ಅದಕ್ಕೆ ಸಾವಿಲ್ಲ ಎಂದು ನಲ್ಲೆ ಪ್ರೀತಿಗೆ ಪ್ರಾಣ ತುಂಬಿದ್ದಾರೆ.

"**ಶಿಲಾಲತೆ:**"– ಈ ಕವನ ಸಂಕಲನದಲ್ಲಿ ಜನಪದ ವಸ್ತುಗಳು ಕಾವ್ಯದ ವಸ್ತುವೆ ಆಗಿದೆ ಎಂಬಂತೆ ಚಿತ್ರಿತವಾಗಿದೆ. "ಒಂದು ದೃಷ್ಟಿಯಿಂದ ಈ ಕಾವ್ಯ ಜನಪದ ಕಾವ್ಯದ ಜಾತಿಗೆ ಸೇರಬೇಕಾದುದ್ದು ಎಂದು ಕುರ್ತಕೋಟಿ ಹೇಳಿದ್ದಾರೆ ಅಂದರೆ ಗ್ರಾಮೀಣ ಜಗತ್ತಿನಲ್ಲಿ ಎಂಬುದು ಇದರರ್ಥ. ಕೆ.ಎಸ್.ನವರಈ ಭಾಗದ ಗೀತೆಗಳಲ್ಲಿ ಬರುವ ಗಂಡು ಅಥವಾ ಗಂಡ ಗ್ರಾಮೀಣ ಜಗತ್ತಿನವನಾಗಿ ಕಾಣುವುದಿಲ್ಲ. ಅವನು ಸ್ವಲ್ಪ ಓದಿದ ನಗರ ಸಂಸ್ಕೃತಿಯಿಂದ ಬಂದವನು ಆದರೆ ಇಲ್ಲಿನ ಹೆಣ್ಣು ಅಥವಾ ಹೆಂಡತಿ ಬಹುತೇಕ ಗ್ರಾಮಂತರ ಪ್ರದೇಶದವಳೆಂಬುದು ಸ್ಪಷ್ಟವಾಗುವುದು ಸಾಮಾನ್ಯವಾಗಿ ಮಧ್ಯಮ ವರ್ಗದ ಜೀವನವನ್ನು ಚಿತ್ರಿಸುವುದೆ ಈ ಕವನಗಳ ಉದ್ದೇಶ. ಈ ಮಧ್ಯಮ ವರ್ಗದ ಕಲ್ಪನೆ ಬಂದುದೆ ನಗರದಿಂದ ಹಳ್ಳಿಯಿಂದಲ್ಲ

ಈ ಸಂಕಲನದ ಪ್ರೇಮ ಗೀತೆಗಳಲ್ಲಿ ನಾವು ಕಾಣುವ ಸಂವೇದನೆ ನಾಗರೀಕವಾದದ್ದೆ ಹೊರತು ಜಾನಪದ ಜಾತಿಯದ್ದಲ್ಲಾ. ಭಾಷೆಯಂತು ಶಿಷ್ಟ ಹಾಡುನುಡಿಯಾಗಿದ್ದು ಗ್ರಾಮೀಣ ಭಾಷೆ ಅದಲ್ಲ. ಇಲ್ಲಿ ಸ್ತ್ರೀ ಸಂವೇದನೆ ಕುರಿತ ಕವನಗಳು ವೈವಯದ್ಯಮಯವಾಗಿ ಕೂಡಿ ಬಂದಿವೆ

| | |
|---|---|
| ಅಪ್ರೋದಿತೆ | ರಾತ್ರಿಯಲಿ ದೂರದಲಿ ಎಲ್ಲೋ |
| ಒಲಗ | ನಲವತ್ತರ ಚಲುವೆ |
| ಏನೇನೋ ಕನಸು | ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ |
| ನೀನಿಲ್ಲದ ಮನೆ | ಎರಡು ಒಂದೆ |
| ಶರತ್–ಶಾರದ | ದುರ್ಮುಖಿ |
| ಕೇಳಬೇಡ ಎಲ್ಲಿಗೆ? | ನೀನರಿಯದ ಒಲವು............ ಈ ಕವನಗಳೆಲ್ಲವು ಸಹ |

ಸ್ತ್ರೀಯ ವಿವಿಧ ಮುಖಗಳಿಂದ ಪ್ರೀತಿ–ವಿರಸರ ಚಿತ್ರಣವಿದೆ.

- " ಬಾಗಿಲಲಿ ತಡೆದು ನಿಲ್ಲಿಸಿದ ಹಾಡು ಮುಗುದಿರಲು
  ಒಂದೇ ಹಾಸನಮೇಲೆ ಗಂಡು ಹೆಣ್ಣು
  ಬಂಧನವೆ ಬಿಡುಗಡೆಯೇ ? ಎಂದು ಬೆರಗಾಗಿರಲು
  ಬೆಳ್ಳಿಯಾದರೆ ಮಾತು ಮೌನ ಹೊನ್ನು"..............ಎಂದು ಕವಿ ತಮ್ಮ ಅಫ್ರೋದತೆ ಕವನದಲ್ಲಿ

ಹೊಸ ಮದುವೆಯ ದಿನ ಗಂಡು ಹೆಣ್ಣುಗಳನ್ನು ಸಮನಾಗಿ ನಿಲ್ಲಿಸಿ ಹಸೆ ಹೇಳುವ ಸಂಪ್ರದಾಯದಲ್ಲಿ ಅಂದಿನ ವಿವಾಹದ ಸಂಭ್ರಮ ಮನೆಮಾಡಿದೆ ಅರುಂಧತಿ ನಕ್ಷತ್ರ ತೋರಿಸುವುದು, ಚಿನ್ನದ ಪಾತ್ರೆಗೆ ನೀರು ತುಂಬಿಸಿ ಇಬ್ಬರ ಕೈಯನ್ನು ಮುಳುಗಿಸಿ ಕೈ ಹಿಡಿಸುವುದು ರಸವತ್ತಾಗಿದೆ.

- " ಮನೆಯೊಳಗೆ ಸದ್ದಡಗಿ ಸಂಜೆ, ತಂಪು–ತಂಪು
  ನನಗೋ ಎದೆಬಾರ
  ಪ್ರಾಣವನ್ನೆ ಹೀರುತಿದೆ ಮಲ್ಲಿಗೆಯ ಕಂಪು–ಕಂಪು
  ಕರೆಯುತ್ತಿದೆ ಚಂದ್ರತೀರ"...................ಎಂದು ಕವಿ ನೀನಲ್ಲದ ಮನೆ ಕವನದಲ್ಲಿ ಪತ್ನಿಯಿಲ್ಲದ

ಮನೆ ಖಾಲಿಯಾಗಿ ಗಂಡನಾದವನು ಹಂಬಲಿಸುವ ವ್ಯಥೆಯಿದೆ. ಪಕ್ಕದಮನೆಯ ಜೋಡಿ ನೋಡಿ ತನ್ನ ಪ್ರೇಯಸಿಯನ್ನು ನೆನೆದು ತವಕಿಸುವ ಪರಿಯಿದೆ. ನಿಜವಾದ ನಿನ್ನ ಮನಸ್ಸಿನ ಪ್ರೀತಿ ಮಾತ್ರ ನನಗೆ ಬೇಕು ನೆರೆಮನೆಯದು ಬೇಡ ಎಂದಿದ್ದಾರೆ.

• " ಒಲವಿರದ ಹೆಣ್ಣು ಬಿಡಿಸೂಳೆಯಾಗಿ ಬೀದಿಯಲೆವಂತೆ ಗಾಳಿ
ಮುಂಗುರುಳ ಸವರಿ ಕಿವಿಗುಸುಗುತಿಹಿದು ಇನ್ನೊಂದು ಮುತ್ತ ಕೇಳಿ
ಆ ತುಟಿಯ ರಂಗು, ಅದರಂಥ ರಂಗು, ದಾಳಿಂಬೆ ಮುಳ್ಳಿನಲ್ಲಿ
ಇಲ್ಲಿಂದ ನೋಡು ಬರಿ ಬೆರಣಿಗುರುತು ಬಂಡೆಗಳ ಕೆನ್ನೆಯಲ್ಲಿ"...............

ಎಂದು ಕವಿ ತಮ್ಮ 'ಶರತ್-ಶಾರದೆ' ಕವನದಲ್ಲಿ ಸುತ್ತಲಿನ ಪ್ರಕೃತಿಯ ಚಲುವೆ ಹೆಣ್ಣಾಗಿ ಕಂಡಿದೆ, ಶರತ್‌ಕಾಲದಲ್ಲಿ ತಾಯಿ ಶಾರದೆಯ ರೂಪು ಲಾವಣ್ಯವೆ ಮುಂಗುರುಳಾಗಿ, ತುಡಿಯ ರಂಗಾಗಿ, ದಾಳಿಂಬೆ ಹಲ್ಲಿನಂತೆ, ಕೆನ್ನೆಯಲ್ಲಿ ಬೇವುಗುಡ್ಡಗಳ ಒನಪು ಕಂಡಿದೆ. ಸಿಹಿಮುತ್ತಿಡುವಂತೆ ಕವಿಗೆ ಮನಸ್ಸಾಗಿದೆ. ಒಟ್ಟಾರೆ ಚೆಲುವು, ಮಳೆ, ಹೆಣ್ಣು, ಹೂವು, ಇವೆಲ್ಲವು ಕವಿಯ ಕಾವ್ಯದಲ್ಲಿ ಉಚ್ಛವಾಗಿವೆ.

**"ಮನೆಯಿಂದ ಮನೆಗೆ":-** ಕವನ ಸಂಕಲನದಲ್ಲಿಯೂ_ ನಿನ್ನ ಪ್ರೀತಿಗೆ, ಹೆಸರ ನೋವು, ಶಿಲೆಗೆ ಹೂವಿನ ವಂಕಿ, ನಾನೊಮ್ಮೆ ಪ್ರೀತಿಸಿದೆ ನಿನ್ನ ..... ಕುಣಿವ ಹೆಣ್ಣು, ಕವನಗಳಲ್ಲಿಯೂ ಸಹಜ ಪ್ರೀತಿ ತಂದೆಯ ಪ್ರೀತಿ ಜೀವನದಲ್ಲಿ ಹೋರಾಟಕ್ಕೆ ಮುಡಿಪಾಗಿಟ್ಟು ಹೆಣ್ಣು ಮಕ್ಕಳ ನೋವು ನಲಿವುಗಳಿವೆ.

• " ನಿನ್ನ ಪ್ರೀತಿಗೆ ಅದರ ರೀತಿಗೆ
ಕಣ್ಣ ಹನಿಗಳ ಕಾಣಿಕೆ?
ಹೊನ್ನ ಚಂದಿರ ನೀಲಿ ತಾರೆಗೆ
ಹೊಂದಲಾರದ ಹೊಲಿಕೆ
ನಿನಿನ್ನ ಪ್ರೀತಿಗೆ ಅದರ ರೀತಿಗೆ
ಚಲುವು ಕನಸಿನ ಜವನಿಕೆ
ಬೆಳ್ಳಿನಿದ್ದೆಯ ತುಟಿಗಳಂಚಿಗೆ
ಸುಳಿದ ಕಿರುನಗೆ ತೋರಿಕೆ"

ಈ ಸುಂದರ ಪ್ರೇಮಕ್ಕೆ ಪ್ರಿಯಾಗಿ ಕೊಡುವ ಕೊಡುಗೆಯು ಪ್ರಸ್ತಾಪವಿರುವುದು ಮೇಲುನೋಟಕ್ಕೆ ಕಂಡರು ಆಳವಾಗಿ ವಿಮರ್ಶಿಸಿದಾಗ ಮನಸಾರೆ ಪ್ರೇಮಿಸುವ ಪ್ರೇಯಸಿಯ ಪ್ರೀತಿಗೆ ಪ್ರಿಯಕರನಾದವನುಅಷ್ಟೆ ಪ್ರಾಮಾಣಿಕವಾಗಿ ಪ್ರೀತಿ ತಲುಪಿಸಲಾರಾದ ನೋವಿದೆ, ಎದೆಯೋಳಗಿನ ನೋವು ಹತಾಶೆ ಹಾಡಗಿ ಹರಿದಿದೆ ಈ ಕವನವು ಚಲನಚಿತ್ರ ಗೀತೆಯಾಗಿಯು ಪ್ರಸಿದ್ದಿಯಾಗಿದೆ. ಸ್ತ್ರೀಯ ಒಳ ಮನಸ್ಸಿನ ಪ್ರೀತಿಯು ತುಡಿತಕ್ಕೆ ಪ್ರತಿಸ್ಪಂದಿಸಲಾರದ ಗಂಡಸಿನ ಅಳಲಿದೆ. ನಿನ್ನ ಪ್ರೀತೆಗೆ ಈ ಕವನ ನಿಜಕ್ಕೂ ಅರ್ಥಪೂರ್ಣವಾಗಿದೆ.

ಒಟ್ಟಾರೆ ಸರಾಗವಲ್ಲದ ಜೀವನದ ದಾರುಣ ಮುಖವನ್ನು ಕೊಡಲು ಉದ್ದೇಶಿತವಾದ ಕವನ ಸಂಕಲನಗಳಲ್ಲಿ ಶಿಲಾಲತೆ, ಮನೆಯಿಂದ ಮನೆಗೆ, ತೆರೆದ ಬಾಗಿಲುಗಳು, ಬದುಕು ಇಕ್ಕಟ್ಟು ಮತ್ತು ಬಿಕ್ಕಟ್ಟುಗಳಿಂದ ಕೂಡಿದುದು ಎಂಬುದನ್ನು ತಿಳಿಸುವುದೆ ಈ ಮೂರು ಕವನಸಂಕಲನಗಳ ವಿಷಯ ಇದಕ್ಕೆ ಅನುಗುಣವಾಗಿ ಅಭಿವ್ಯಕ್ತಿ ರೂಪವನ್ನೆ ಆಯಾ ಕವಿತೆಗಳು ಪಡೆದುಕೊಳ್ಳುತ್ತಾ ಬಂದಿವೆ. ಮೊದಲ ಗುಂಪಿನ ಕವನಸಂಕಲನಗಳ ಕವಿತೆಯಲ್ಲಿ ತೋರದ ಬಾಷೆಯ ಉಪಯೋಗ ಮತ್ತು ಅಭಿವ್ಯಕ್ತಿ ಕಲಿಷ್ಠತೆಗಳು ಎರಡನೆ ಗುಂಪಿನ ಸಂಕಲನಗಳಲ್ಲಿವೆ. ನವ್ಯದ ಸ್ಥಿತಿಯನ್ನು ಅನುಸರಿಸಲು ಶಿಲಾಲತೆಹೊರಟರೆ ಅದರಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮನೆಯಿಂದ ಮನೆಗೆ ಸಂಕಲನದಲ್ಲಿದೆ.

• " ಭರವಸೆಗಳಿಲ್ಲದೆಯೇ ನಾ ನಿನ್ನ ಪ್ರೀತಿಸಿದೆ ಅಪರಾಧಿ ಬಾಯಿಲ್ಲ ನನಗೆ
ಮಚ್ಚರದ ಚಳುಕುಗಳು ನಾಚುವ ಹತಾಶೆಗಳು ಒಂದನೊಂದನಮತೆಯೇ ನಾನು".....

ಎಂದು ನಾನೊಮ್ಮೆ ಪ್ರೀತಿಸದೆ ನಿನ್ನ ಕವನದಲ್ಲಿ ಹತಾಶೆಯಿಂದ ಪ್ರೀತಿಸಿದವಳು ನಾನು ಕೈ ಕೊಟ್ಟಾಗ ಜೀವನವೆ ಬೇಸರ ಎಂದು ಒಲುಮೆಯ ಕವಿ ನೊಂದಿದ್ದಾರೆ. ಇಲ್ಲಿಯು ಸ್ತ್ರೀಯ ಸಂವೇದನೆಯ ವಿವಿಧ ಮುಖ ಪರಿಚಯವಾಗಿದೆ.

"ತೆರೆದ ಬಾಗಿಲು:"– ಕವನ ಸಂಕಲನದಲ್ಲಿ ಕೆ.ಎಸ್.ನವರ ಕಾವ್ಯ ಮಜಲುಗಳಲ್ಲಿ ಬಿನ್ನತೆ ಕಾಣುತ್ತೇವೆ. ಎಲ್ಲಾ ಪ್ರಯತ್ನಗಳು ಪ್ರಯೋಗಗಳೆ ಆಗಿವೆ. ಅನಿವಾರ್ಯದ ಬೆಳವಣಿಗೆಯ ಮುಖ್ಯ ಹಂತದ ಪ್ರತಿನಿಧಿಯಾಗಿ ಈ ಸಂಕಲನ ಮೂಡಿದೆ 16 ಕವನಗಳು 16 ವರ್ಷಗಳ ಚಿಂತನರಯ ಫಲವೆನ್ನುವಂತಿವೆ.ಕವಿ ಇಲ್ಲಿ ತಮ್ಮ ಸಹಜ ಸೃಜನ ಶೀಲ ಧೋರಣೆಗೆ ಹಿಂದಿರುಗಿದ್ದಾರೆ. ಬದಲಾವಣೆಯ ಸುಸ್ಥಿರ ನೆಲೆಯನ್ನು ಈ ಸಂಕಲನ ಅರ್ಥಪೂರ್ಣವಾಗಿ ಸಂಕೇತಿಸುವುದು. ಕವಿ ಕೆ.ಎಸ್.ನರವರ "ಶಿಲಾಲತೇಲಿ ಅಲಂಕಾರ ರೂಪಗಳನ್ನು ಕಟ್ಟಕೊಂಡು ಕುಣಿದಿದು ಸುಖ, ಅದನ್ನು ಬಿಟ್ಟು ಬೇರೆ ಬರೆಯೋಣ ಅಂತ ಯೋಚನೆ ಮಾಡಿದೆ. ಈ ಸಂಕೀರ್ಣತೆ, ಜಟಿಲತೆ, ಕ್ಲಿಷ್ಠತೆ, ಇವೆಲ್ಲಬಿಟ್ಟು ಕಾವ್ಯ ರಚಿಸಿದರೆ ಹೇಗಿರಬಹುದೆಂದು ಯೋಚಿಸುತ್ತಿದ್ದೆ" ಎಂದಿದ್ದಾರೆ.

ಸ್ತ್ರೀಯ ಸಂವೇದನೆ, ಸ್ತ್ರೀ ಕಲ್ಪನೆ ಈ ಸಂಕಲನದಲ್ಲಿ ವಿಬಿನ್ನ ಸ್ಥರಗಳಲ್ಲಿ ಅರಳಿದೆ ಜೀವನ ರಹಸ್ಯವನ್ನು ಬೇಧಿಸುವ ಒಂದು ವಿಧಾನವಾಗಿ ಇಲ್ಲಿ ವಸ್ತು ಬಳಕೆಯಾಗಿದೆ.

- **" ನನ್ನ ಮಾತೇ ನಿನ್ನ ಕಿವಿಗೆ ಬೀಳುತ್ತಿಲ್ಲ**
  **ಬೀದಿಯಂಚಿಗೆ ನನ್ನ ಬಾಗಿಲಿರುವುದು ತಪ್ಪೆ?**
  **ಬಾಗಿಲನು ತೆರೆದಿರುವುದೊಂದುತಪ್ಪೆ?**

ತೆರೆದ ಬಾಗಿಲು ನಾನು ಸರ್ವಖಿತು ಬಂದರು"........ ಎಂದು ಕವಿ ತೆರೆದಬಾಗಿಲು ಕವನದಲ್ಲಿ ತನ್ನ ಹೆಂಡತಿ ತವರಿಗೆ ಹೋಗಿದ್ದು ಹಿಂದಿರುಗಿ ಬಂದಾಗ ಇಬ್ಬರ ನಡುವೆ ನಡೆದ ಸ್ವಾರಸ್ಯಕರ ಸಂಭಾಷಣೆಯೇ ಇದರ ಮೂಲ ವಸ್ತು. ಮನೆ ಅಸ್ತ ವ್ಯಸ್ತೆ ನೋಡಿ ಹೆಂಡತಿಯ ಅಸಮಾದಾನ, ಕವಿ ಸಮಾದಾನಿಸಲು ಹವಣಿಕೆ, ಕಾರಣಗಳ ಸುರಿಮಳೆ, ಹೆಣ್ಣಿನ ತವಕ, ಇಲ್ಲಿ ಬಿಂಬಿತವಾಗಿದೆ.

- **"ಸಂಜೆಯೂ ಆಯಿತು ನೀನೂ ಬಂದೆ**
  **ಬಸ್ಸು ಸಿಕ್ಕಿತೆ ನಿನಗೆ ಸಂತೆಯ ದಿನ?**
  **ಇಷ್ಟು ಕತ್ತಲೆ ಮಾಡಿಕೊಂಡು ಬರುವುದೆ ಹೇಳು?**
  **ನಿನ್ನ ಮಗುವಿಗೆ ಎಂದು ನಾಮಕಾರಣ?**
  **ಇವಳು ಹೇಗಿದ್ದಾಳೆ ?ಎಂದು ಬರುವಳು? ಗೊತ್ತು ......... ಇದೊಂದು**

ಶೇಷ್ಠವಾದ ಕವಿತೆ ಸಾವೇ ಇದರ ವಸ್ತು ಸಾವಿನ ಭಯ ಉಂಟುಮಾಡಿದ ಪರಿಣಾಮದ ಚಿತ್ರಣವೇ ಇದರ ಉದ್ದೇಶ. ಹೆಂಡತಿ ಭತ್ತವನ್ನು ಬಿಡಿಸಿತರಲು ಊರಿಗೆ ಹೋಗಿರುವ ಚಿತ್ರವಿದೆ. ಅವರ 'ಕುಂಕುಮ ಭೂಮಿ' ಕವನದಲ್ಲಿ ಭೂಮಿಯನ್ನು ಹೆಣ್ಣಿಗೆ ಹೋಲಿಸಿರುವ ಚಿತ್ರಣವಿದೆ. ಆಕೆಯ ಸ್ವಭಾವ ಪ್ರಕೃತಿಯಾದ ಸಂತಾನಾಭಿವ್ಯಕ್ತಿಯ ಪ್ರಕ್ರಿಯೆಯನ್ನು ವಿವರಿಸಿದ್ದಾರೆ.

- **" ಕೈಗೆ ಸಿಕ್ಕಿದ್ದಾನೆ ಒರಗಿ ನಿಟ್ಟುಸಿರೆಳೆದು**
  **ಹಳದಿಯಾಗಿದ್ದಾಳೆ ನಾಳೆ – ಬಸಿರಿ**
  **ಬಂದಿರುಳೆ ಹಿಗ್ಗು ಏಳೆಂಟು ತಿಂಗಳು ನೋವು**
  **ಒಡಿಲ ತುಂಬುವ ಸಮಯ ಕಿರಣ ಲಹರಿ"**..........ಎಂದು ತಮ್ಮ ಕವನದಲ್ಲಿ ಅದಮ್ಯವಾದ

ಸ್ತ್ರೀ ಸಂವೇದನೆಯನ್ನು ವಿಶ್ಲೇಷಿಸಿದ್ದಾರೆ. ನೆಲದೊಡೆಲ ಕೆಂಪು ಎಂಬ ಪ್ರಯೋಗ ಸೇರಿಸಿದರೆ ಪೂರ್ಣ ಕ್ರಿಯೇ ಲಭಿಸುತ್ತದೆ. ಕೆ.ಎಸ್. ನವರು ರಾಜತ್ವ ದೈವತ್ವಗಳನ್ನು ನಿರಾಕರಿಸಿ ಜನ ಸಾಮಾನ್ಯರ ಬದುಕಿನ ಘನತೆಯನ್ನು ಮಾನವ ಶ್ರಮದ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ. ವಾಸ್ತಾವನುಭವದ ಮೇಲೆ ರಚಿತವಾಗಿರುವ ಸರಳವು, ಸಂಕೀರ್ಣವು, ಅಲ್ಲದ ಎರಡರ ಗುಣವನ್ನು ಒಳಗೊಂಡ ಈ ಕವನಗಳು ದೀವಟ್ಟಿಗೆ ಹಿಡಿದು ನಡೆವಂತೆ ಕಂಡಿವೆ.

'ಪ್ರೇಮ ಪತ್ರ ಕವನದಲ್ಲಿಯೂ ಕವಿ ಹೆಂಡತಿಯಿಲ್ಲದ ಮನೆಯಲ್ಲಿನ ಗೋಳನ್ನು ಹಾಸ್ಯವಾಗಿ ನವಿರಾಗಿ ಚಿತ್ರಿಸಿದ್ದಾರೆ. ಅರ್ಧಾಂಗಿ ತವರಿಗೆ ಹೋಗಿದ್ದಾಗ ಸಂಸಾರದಲ್ಲಿ ಸಿಕ್ಕ ಸಂಕಟಗಳು, ನಿರ್ವಹಣೆಯ ಜವಾಬ್ದಾರಿ,ಅದರೋಳಗೆ ಪತ್ರ ಬರೆದು ಕರೆವುದು, ನಂತರ ಬೇಡ ಎಂದು ಹೇಳುವುದು ಎಲ್ಲವೂ ಸ್ತ್ರೀಯ ಕಲ್ಪನೆಯಲ್ಲಿ ಮೂಡಿಬಂದಿದೆ.

• “ ನೀ ಮನೆಯೊಳಿಲ್ಲದಿರುವುದು ತಿಳಿದು / ತಿಳಿಯರೆಯ
ರಾಜ್ಯ ರಾಜ್ಯಗಳಿಂದ ಬಂಧುಗಳ ಆಗಮನ
ನೀರು ಹತ್ತರ ಮಹಡಿಯಲ್ಲಿ ರೋದನೆ ಕದನ
**ಕಾಣೆಯಾಗಿರುವ ಕಲ್ಪನೆಯ ಕಾವ್ಯೋದ್ಯಾನ**..........ಎಂದು ಕವಿ ಹೆಂಡತಿಯಿದ್ದಾಗ ಬರದ ನೆಂಟರು ಅವಳಿಲ್ಲದಾಗ ಬಂದ ಪರಿ ಹೇಳುತ್ತ ನೀರು ಬರದೆ ರೋದನ ಹೆಚ್ಚಾಗಿ ಕಲ್ಪನೆಯ ಸಾಹಿತ್ಯ ರಚನೆಯು ಕಾಣೆಯಾಗಿದೆ ಎಂದಿದ್ದಾರೆ. ಅವಳಿಲ್ಲಿದಾಗ ನಾಟಕ ನೋಡಲು ಹೋದ ಪರಿ ತುಂಬಾ ಹಾಸ್ಯತ್ಮಕವಾಗಿದೆ.

**“ನವ ಪಲ್ಲವ”** – ಕವನಸಂಕಲನದಲ್ಲಿಯೂ ‘ ನವಪಲ್ಲವ’ ಕವನವು ಪ್ರಕೃತಿಯೇ ಹೆಣ್ಣೆಂದು ಸಂಭ್ರಮಿಸುವ ಪರಿಯಿದೆ, ತಳಿರು ಸೀರೆ, ಹೂವಿನ ಓಲೆ, ಬಿದಿರ ಬಿಂದಿಗೆ, ಬಾರದಂದಿಳಿದ ಜಲಪಾತವೆ ಮುಂಗುರುಳು, ನಿನಗಾಗಿ ನಾನು ಮಲ್ಲಿಗೆಯ ಸರವನ್ನು ತಂದೆ, ಮಾರಿದಳಿರ ಮೈಯವಳು ನನ್ನ ಕೈಹಿಡಿದವಳು, ಕೋಗಿಲೆ ಗಾನವಾಡುವಾಗಿ ನೀ ಒಲವಿನಿಂರಲಿ ನನ್ನ ಬಳಿಗೆ ಬಾ ಎಂದು ಕೂಗಿದ್ದಾರೆ.

• **“ ನನ್ನ ಕೈಹಿಡಿದವಳೆ
ಮಾರಿದಳಿರ ಮೈಯವಳೆ
ದೂರ ನಿಲ್ಲುವೇ ಏಕೆ ಚೈತ್ರದೋಳಗೆ?
ಕೋಗಿಲೆಯ ಹಾಡಿನಲ್ಲಿ / ತಳಿರ ಸಿರಿಬಿಡಿನಲಿ
ಒಲುವ ಚಿಮ್ಮುತ ಬಾರೆ ನನ್ನ ಬಳಿಗೆ”**.........
ಎಂದು ಆಶಿಸಿದ್ದಾರೆ. ಈ ಕವನದ ಎಲ್ಲಾ ಒಳಾರ್ಥದಲ್ಲಿರುವ ಸುಂದರ ಸ್ತ್ರೀಯೆ ಚಿತ್ರಿತವಾಗಿದ್ದಾಳೆ. ಪ್ರಕೃತಿಯೇ ಹೆಣ್ಣಾಗಿ ಪತ್ನಿಯಾಗಿ ಚಲುವೆಯಾಗಿ ಕವಿಗೆ ಸ್ಪೂರ್ತಿಯಾಗಿದ್ದಾಳೆ.

• **“ ಎಂದೊ ಕೇಳಿದ ಒಂದು ಹಾಡನು
ನಾನು ವೀಣೆಗೆ ಕಲಿಸಿದೆ
ಅದನ್ನೆ ನೆನೆಯುತ ನೀನು ಹಾಡಲು
ನಾನು ಜತೆಗೂ ನುಡಿಸಿದೆ”**................. ಎಂದು ದಂಪತಿಗಳಿಬ್ಬರೂ ಮೈಮರೆತು ಹಾಡಿದ ಹಾಡಿನ ಗುಂಗಿನಲ್ಲಿ ಮೈಮರೆತಿರುವ ಪರಿ ಸೊಗಸಾಗಿ ಚಿತ್ರಿತವಾಗಿದೆ. ‘ ಎಂದೊ ಕೇಳಿದ ಹಾಡು’ ಕವನದಲ್ಲಿ ‘ ಹಾಡೆ ಹಾದಿಯ ತೋರಿತು’... ಎಂದಿದ್ದಾರೆ. ಪ್ರೀಯೆಯ ಸಾನಿಧ್ಯದಲ್ಲಿ ವೀಣೆ ನುಡಿಸುತ್ತಾ ಗಾಯನದ ಸಂಭ್ರಮದಲ್ಲಿ ತೆಲುತ್ತಿರುವ ಪತಿಯ ಮನಸ್ಸು ಪತ್ನಿಯ ಗಾನಕ್ಕೆ ಮನಸೋತಂತಿದೆ.

**‘ ಅದೀನದ ನೆನಪು’** ಕವನದಲ್ಲಿ ಮದುವೆಗೆ ಮೊದಲು ಪತ್ನಿಯಾಗುವವಳನ್ನು ಕಂಡ ಮೊದಲ ದಿನದ ನೆನಪು, ಸಡಗರದಿಂದ, ಉಕ್ಕುವ ಪರಿಯಿದೆ.

• **“ ಮೂವತ್ತು ವರುಷ ಕಳೆದಿರಲು ಇಂತು
ನೀ ಬಂದು ನನ್ನ ಮನೆಗೆ
ನಾ ನಿನ್ನ ಕಂಡ ಆ ಮೊದಲ ದಿನದ
ಸವಿ ನೆನಪು ಬಂತು ನನಗೆ’**........... ಎಂದು ಕವಿ ತಮ್ಮ ಜೀವನಾನುಭವವನ್ನೆ ಚಿತ್ರಿಸಿದ್ದಾರೆ. ಬಿಸಿಹಾಲು ತರುವುದು, ಇವರು ನೋಡುವುದು, ಹಾಡು ಹೇಳಿಸುವುದು, ಹಾಲು ಕುಡಿಯಿರಿ ಎನ್ನುವುದು, ಆಕೆ ನೋಡುವುದು, ಮನಗೆಲ್ಲೂವುದು, ಅವಳ ಒಪ್ಪಿಗೆಗಾಗಿ ಪತ್ರ ಬರೆಯುವೆ ಎಂದು ಬರುವುದು ಸ್ತ್ರೀಯ ವೈವಾಹಿಕ ಜೀವನಕ್ಕೆ ಪಾದರ್ಪಣೆ ಮಾಡುವಾಗಿನ ಹಂತವು ರಸಮಯವಾಗಿದೆ.

"ಮುಂಡು ಮಲ್ಲಿಗೆ" ಕವನ ಸಂಕಲನದಲ್ಲಿಯೂ ಸಹ ಹೆಣ್ಣಿನ ಕಲ್ಪನೆ ಅಪಾರವಾಗಿದೆ. ಸಮಾಜದಲ್ಲಿ ಹೆಣ್ಣು ಮತ್ತು ಗಂಡು ಪ್ರೀತಿಯ ಎರಡು ಮುಖಗಳು. ಇಲ್ಲಿರುವ ಕವನಗಳು ಸಮರ್ಥವಾಗಿ ಸ್ತ್ರೀ ಸಂವೇದನೆಯನ್ನು ಕವಿ ಕೆ.ಎಸ್. ನರಸಿಂಹಸ್ವಾಮಿ ಯವರ ಕಲ್ಪನೆಯಲ್ಲಿ ಕಾಣಬಹುದಾಗಿದೆ.

| | |
|---|---|
| ಸಂಗಮ | ಯಾವಕಾಲದಲ್ಲಿ ಯಾರು ನಕ್ಕರೊ |
| ನಾನಿನ್ನ ಕಂಡೆ | ಒಂದು ನೆನಪು |
| ಪ್ರೇಮ | ದೋಣಿ ತುಂಬ ಹುಡುಗಿಯರು |
| ಯುಗಾಧಿ 87 | ಅವಳುಯಾರು |
| ಮೌನ ಚಿತ್ರ | ಒಂದು ನಿಮಿಷ ಬಂದು ಹೋಗು |
| ಕತ್ತಲೆ ಬೆಳಕು | ಹಿಂದೆ ಎಂದಾದರೂ |
| ನೋವು ನಲಿವು | ಒಳಗೆಬಾರೆನ್ನ ಒಲವೇ |
| ನಕ್ಕುಬಿಡು | ನಿನ್ನ ನಗೆ ಮಲ್ಲಿಗೆ |
| ಮೊದಲ ಮುತ್ತು | ಮಲ್ಲಿಗೆಯ ಮಾಲೆ |
| ಜಾನಕಿ | ಚಂಗುಲಾಬಿಯ ನಡುವೆ |
| ಒಂದು ಪಯಣ | ಮೌನ |

ಕಣಿವೆಯಲ್ಲಿ ನಡೆದ ಮದುವೆ ನಿನ್ನ ಚಿತ್ರ ......... ಈಗೆ ನೂರಾರು ಕವನಗಳಲ್ಲಿ ಹೆಣ್ಣಿನ ಭಾವನೆಗಳ ತಾಕಲಾಟ, ಮನೋಭಿಲಾಷೆಗಳನ್ನು ಮಧುರವಾಗಿ ಕನ್ನಡ ಸಾಹಿತ್ಯಕ್ಕೆ ತುಂಬಿಕೊಟ್ಟ ಕೀರ್ತಿ ಕೆ.ಎಸ್.ನ ನವರಿಗೆ ಸಲ್ಲುತ್ತದೆ. ನಲ್ಲ ನಲ್ಲೆಯರ ಶೃಂಗಾರ ವಿವಾಹದ ಮೊದಲ ದಿನಗಳು ಊರಿನ ಹೆಂಗಳೆಯರು, ಹದಿನಾರರ ಷೋಡಶೀಯರು ಇಲ್ಲಿ ಸ್ಥಾನ ಪಡೆದಿದ್ದಾರೆ. ಕವಿಯ/ನಲ್ಲನ/ಪ್ರಿಯಕರನ ಒದ್ದಾಟ/ಕಾಡಿಸುವ ಪ್ರೇಯಸಿಯರು/ ಸಂಗಾತಿಯೊಂದಿಗಿನ ದಾಂಪತ್ಯ /ಪ್ರಣಯ ಹಾಸ್ಯಮಯ ಪ್ರೇಮ ವಿವೇದನೆ ಎಲ್ಲವೂ ಸರಳಸುಂದರವಾಗಿ ಮಿಡಿದಿದೆ.

"ಮಣ್ಣಿನೊಡನೆ ಮಣ್ಣಿನಂತೆ ನನ್ನ ನಿನ್ನ ಸಂಗಮ
ನೀರಿನೊಡನೆ ನೀರಿನಮತೆ ನನ್ನ ನಿನ್ನ ಸಂಗಮ" .........

ಎಂದು ಚೆಲುವೆಯನ್ನು ಮನದಲ್ಲಿ ಪ್ರೀತಿಸಿ ಕನವರಿಸುವ ಪ್ರೇಮಿ ಗಿಡದ ಹಣ್ಣಿನ ರಸದಂತೆ, ಬೆಳಕಿನೊಡನೆ ಬೆಳಕಂತೆ, ಜೇನಿನಂತೆ, ಚಿತ್ತಾರದ ಬಣ್ಣದಂತೆ, ತೇಲಿಬಂದ ಗಾನದಂತೆ ಇಬ್ಬರ ಸಂಗಮವಾಗಿದೆ.ಎಂದು ಕನವರಿಸುತ್ತಾರೆ.

"ಮೈಮೈಗೆ ಸೋಂಕಿ ಆಗಿ ಆಗಿತ್ತು ಸಂಜೆ
ಹುಣ್ಣಿಮೆಯ ತಂಪಿನಲ್ಲಿ
ನಾನಿನ್ನ ಕಂಡೆ ನಿನ್ನೊಲವ ಕಂಡೆ
ಮಲ್ಲಿಗೆ ಕಂಪಿನಲ್ಲಿ"

ಎಂದು ಕವಿ ನಾನಿನ್ನ ಕಂಡೆ ಕವನದಲ್ಲಿ ನಲ್ಲೆಯ ಮುಗುಳು ನಗೆ ನಸುನಾಚಿಕೆ ಮತ್ತು ತಂದಂತೆ ಇತ್ತು ಆಕ್ಷಣದಲ್ಲೆ ಮೈಮೈಸೋಕುತ್ತ ಬೆಳಿಗ್ಗೆ ಸಂಜೆಯಾಗಿದ್ದೆ ತಿಳಿಯದ್ದೆ ಆ ದಿನವು ಹುಣ್ಣಿಮೆ ಅದರ ಬೆಳದಿಂಗಳ ತಂಪು ಎಲ್ಲವೂ ಪ್ರಣಯಕ್ಕೆ ಸ್ಫೂರ್ತಿ ಚಲುಮೆಯಂತಿರುವಾಗ ಕವಿ ನಾನಿನ್ನ ಕಂಡೆ ನಿನ್ನೊಲವ ಕಂಡೆ ಮಲ್ಲಿಗೆಯ ಪರಿಮಳ ಸಹಿತ ಎಂಬ ಮಾತು ಅರ್ಥ ಗರ್ಬಿತವಾಗಿದೆ. ಸಹಜವಾಗಿ ಇಲ್ಲಿ ಪ್ರಕೃತಿ ಮತ್ತು ಹೆಣ್ಣು ಎರಡು ಒಂದೆ.

"ಪ್ರೇಮ ಕವನವು" ಸಹ ಅದೇ ಮನದಲ್ಲಿಯ ಪ್ರೀತಿಗಾಗಿ ಹಂಬಲಿಸುವ ಪ್ರಿಯಕರನ ಮನದ ತುಡಿತವಿದೆ. ತನ್ನವಳು ಮಾಲುಗಣ್ಣಿನ ಹೆಣ್ಣೆಂದು ಅದೃಷ್ಟ ತರುವಳೆಂದು ಬಿಗಿದಪ್ಪಿ ಮಾತಾಡುತ್ತಾ

- "ಬಾರೆನ್ನ ಮನದನ್ನೆ ಬರಲಿ ಹತ್ತಿರ ಕೆನ್ನೆ
  ಮುತ್ತಿನಲ್ಲಿ ಒಂದಾಗಲೆರೆಡು ಜೀವ
  ಬಾಳಿನೇರಿಳಿತಗಳ ಮುಗಿವಿರದ ಪಯಣಕ್ಕೆ
  ಶುಭವ ಕೋರಲಿ ಸುಳಿಸು ಧನ್ಯ ಭಾವ___"

ಎಂದು ಸಂಕೋಚವಿಲ್ಲದೆ ಮಿಲನಕ್ಕೆ ಹಾತೋರಿಯುವ ಪತಿಯಾಗಿ ಪತ್ನಿಯನ್ನು ಶಯಾಗೃಹಕ್ಕೆ ಕರೆಯುವಲ್ಲಿ ನಿಜವಾದ ದಾಂಪತ್ಯ ಪ್ರೇಮವಿದೆ. ರೂಪ, ಲಾವಣ್ಯ, ಅಂದ ಚಂದಕ್ಕಿಂತ ಮುಖ್ಯ ಪ್ರೀತಿ. ಆಕೆಯ ಶುದ್ದ ಹೃದಯವೇ ಬಾಳಿಗೆ ಚೇತನ ಎಂದು ನಿರೂಪಿಸಿದ್ದಾರೆ.

ಕೆ.ಎಸ್.ನ ರವರು ಕೇವಲ ಬಾಯಲ್ಲೆ ಪ್ರೀತಿ ತೋರುವವರಲ್ಲ. ಮೌನದ ಮಾತುಗಳಲ್ಲೆ. ಪ್ರೀತಿಯ ಅಂತರಾಳಕ್ಕೆ ಇಳಿಯ ಬಲ್ಲ ಚಾಣಾಕ್ಷರು . ಪ್ರಿಯ ಪತ್ನಿಯ ಸನಿಹ ಪ್ರಣಯ ವೆಲ್ಲವು ಅಂತರಂಗದಲ್ಲೆ ತುಂಬಿ ತುಳುಕುವಾಗ ಪದಗಳ ಸಂಭ್ರಮು ವೇಕೆಂದಿದ್ದಾರೆ.

- ನಿನ್ನ ಕಂಡೊಡನೆಯೇ ಒಳ ಮನೆಯ ದೀಪಗಳು
  ಇನ್ನಷ್ಟು ಹೊಳಪಾಗಿ ಬೆಳಗುತಿಹವು
  ಪೆಟ್ಟಿಗೆಯ ಒಳಗಿರಲಿ ನೀ ತಂದ ಸೀರೆಗಳು
  ನಿನಗೆ ಬಿಡುವಾದಾಗ ಒದರಬಹುದು.

ಎಂದು ಕವಿ ತಮ್ಮ ಮೌನ ಚಿತ್ರ ಕವನದಲ್ಲಿ ಹೆಂಡತಿಯಿಂದ ಮನೆಗೆ ಶೋಭೆ ಹೆಚ್ಚುತ್ತದೆ ಎಂದಿದ್ದಾರೆ. ಆಕೆ ಬರುವ ಹೋಗುವ ದಾರಿಯಲ್ಲಿ ಏನೆಲ್ಲ ಬದಲಾವಣೆಗಳಾದವೆಂದು ಸ್ವಾರಸ್ಯಕರವಾಗಿ ಚಿತ್ರಿಸಿದ್ದಾರೆ. ಈ ಬದುಕಿನ ಆನಂದ ಹೆಣ್ಣಿನಿಂದಲೇ ಅವಳ ಅಸ್ತಿತ್ವವೇ ಈ ಜೀವನದುಸಿರೆಂದು ಬೀಗಿದ್ದಾರೆ.

ಕೆ.ಎಸ್.ನ ರವರು ಎಂದಿಗು ಜೀವನಕ್ಕೆ ವಿರೋದಿಯಾಗಿ ವಿಮುಖವಾದವರಲ್ಲ. ಬದುಕಿಗೆ ಬೆನ್ನು ತೋರಿಸಿದವರನ್ನು ಬದಲಾಗಿ ಪ್ರೀತಿಯಿಂದ ಬಂದುದನ್ನು ಕಣ್ಣುಗೊತ್ತಿಕೊಂಡು ತೆರೆದ ಹೃದಯದ ಬಾಗಿಲಿನಿಂದ ಸ್ವಾಗತಿಸಿ ತಮ್ಮದಾಗಿಸಿಕೊಂಡವರೆಂದರೆ ಅತಿಶಯೋಕ್ತಿಯಲ್ಲ. ಅವರ ಸ್ತ್ರೀ ಪ್ರೇಮ ಅಮುಲ್ಯವಾದುದು.

- "ಕರೆದುಬಿಡು ಬಂದುಬಿಡುವೆನಿಲ್ಲಿಂದಲೇ ಆಗಲಿ
  ಬೆಟ್ಟಹತ್ತಿ ಹೋಳೆಯ ದಾಟಿ ಯಾರೇ ನನ್ನ ತಡೆಯಲಿ"
- " ಬದುಕಿಗಿಂತ ಕನಸು ಲೇಸು ಎಂಬ ನಿನ್ನ ರೀತಿಗೆ
  ಕೈಮುಗಿವೆನು ಬಿಸಿ ಹಾಲಿನ ಬಟ್ಟಲಂತ ಪ್ರೀತಿಗೆ
- "ಬಾ ಹತ್ತಿರ ಬೆರಳ ಹಿಡಿದು ಮುಂದೆ ಸಾಗು ಸುಮ್ಮನೆ
  ನಕ್ಕು ಬಿಡು ನೋಡುತ್ತಿದೆ ಲೋಕವೆಲ್ಲ ನಮ್ಮನೆ"
- "ಚಂಗುಲಾಬಿಯ ನಡುವೆ ನಾನಿನ್ನ ಕಂಡೆ
  ನಿನ್ನ ಮುಡಿಯೊಳಗಿತ್ತು ಮಲ್ಲಿಗೆಯ ದಂಡೆ
  ನೀನಾವ ದೇವತೆಯ ನಾನೇನು ಬಲ್ಲೆ
  ಬಿಳಿಯುಡುಗೆ ಉಟ್ಟವಳೆ ಓ ನನ್ನ ನಲ್ಲೆ" .........

ಗೇ ಕವಿಯ ಹೃದಯಂತರಾಳದಲ್ಲಿ ಮಡುಗಟ್ಟಿರುವ ಪ್ರೇಮ ಕಾವ್ಯದ ಹೊನಲಾಗಿ ಹರಿದಿದೆ ಅದಕ್ಕೆ ಮೇರೆ ಎಂಬುದಿಲ್ಲ. ತ್ವಿಕವಾದ ಪರಿಶುದ್ದ ಪ್ರಣಯ ಗಂಗೆ ಯಲ್ಲೆ ಮೀರಿ ಹರಿದಿದೆ. ಸ್ತ್ರೀ ಕಲ್ಪನೆ ಎಂದರೆ ಬಹುಶಹ ನಲ್ಲ ನಲ್ಲೆಯರ ದಾಂಪತ್ಯ ಪ್ರೇಮಕ್ಕೆ ರಿಸಿದ್ದಾರೆ.

"ನವಿಲದನಿ" ಕವನ ಸಂಕಲನದಲ್ಲಿಯೂ ನಾವು ಕೆ.ಎಸ್. ನ. ರವರ ನವಿರಾದ ಪ್ರೇಮದ ಸಿಂಚನದ ಸೆಳೆತ ಕಾಣಬಹುದು. ಅಂತೆಯೇ ಅವರ

| | |
|---|---|
| ನೀನು ಬಯಸಿದ ಹೂವು | ಪದ್ಯ ಮುಗಿದ ಬೆಳಗು |
| ಕಾಮಾಕ್ಷಿ | ಕಮಲ ಓ ಕಮಲ |
| ಮೊದಲಸಲ ಕಂಡಾಗ | ಬಾರಾ ಜೊತೆಗೆ |
| ನೀ ಬಳಿಗೆ ಬಂದಾಗ | ನಿನ್ನ ಕಾಣುವ ತನಕ |
| ಪಟೇಲನ ಮಗಳು | ಮಾತು ಮುತ್ತು |
| ಒಲವು ಕಾಮನಬಿಲ್ಲು | ಹೂವು ಅರಳುವ ಮುನ್ನ |
| ನಾಕಾದಿರುವೆನು | ಎಷ್ಟು ನಾಚಿಕೆ ನಿನಗೆ |
| ಹುಡುಕುತ್ತಾ ಬಂದೆ | ನೆನಪಿನಂಗಳದಲ್ಲಿ |
| ಸಂಧ್ಯಾಗ್ನಿ | ನೀನು ಯಾರೆ |
| ಮುಡಿದ ಹೂ | ಸೇವಂತಿಗೆ ಹಾಡು |
| ಪ್ರಮಾಥಿ | ಇರುಳ ಹಾಡು |

ಹೀಗೆ ಈ ಎಲ್ಲಾ ಕವನಗಳಿಯೂ ಹೆಣ್ಣಿನ ಚೆಲುವು, ಒಲವು, ಪುರುಷನ ಪ್ರತಿಕ್ರಿಯೆಯನ್ನು ಕಾಣಬಹುದು. ಒಂದೊಂದು ಕವನಗಳು ವಿಭಿನ್ನವಾದ ನಿಲುವು ಹೊಂದಿವೆ. ದುಂಡುಮಲ್ಲಿಗೆಯ ಮುಂದಿನ ಹಾದಿ ಇಲ್ಲಿ ತೆರೆದಿದೆ. ಕವಿ ಕೆ.ಎಸ್.ನ. ರವರ 'ಕಾಮಾಕ್ಷಿ' ಕವನದಲ್ಲಿ ನೈಜ ಚಿತ್ರಣವನ್ನೇ ಕಣ್ಣಮುಂದೆ ತಂದಿದ್ದಾರೆ. ಮದುವೆಯ ಮೊದಲ ಹೊಸತರ ಹೆಣ್ಣಿನ ವರ್ತನೆಗಳ ಮೇಲೆ ಹಾಸ್ಯಾತ್ಮಕವಾಗಿ ಚಿತ್ರಿಸಿದ್ದಾರೆ.

- " ಮಲ್ಲಿಗೆ ಗುಲಾಬಿ, ಸಂಪಗೆ ಹೆರಳಲಿ
  ಕೊರಳಲಿ ಶಂಖದ ಹಾರ, ಕೈಯಲ್ಲಿರುವುದು ಕಂಕಣವಲ್ಲ
  ಎಚ್.ಎಂ.ಟಿ. ಗಡಿಯಾರ
  ತುಸು ಕಪ್ಪಾದರು ತುಂಬಾ ಚೆಲುವೆ

"ಕಬ್ಬನ್ ಪೇಟೆಯ ಕಾಮಾಕ್ಷಿ:" ---- ಎಂದು ಕವಿ ಇಲ್ಲಿ ತುಂಬಾ ಹೊಸದಾಗಿ ಸಮಾಜದಲ್ಲಿ ಹೆಣ್ಣಿನ ಕಲ್ಪನೆ ಹೀಗಿರಬಹುದೆಂದು ಕಲ್ಪಿಸಿದ್ದಾರೆ.

- " ಸಂಕೋಚವಿತ್ತು ನಾಚಿಕೆಯಿತ್ತು ನಿನ್ನೊಳಗೆ

  ಅರ್ಥವಾಯಿತು ನನಗೆ ನಿನ್ನ ಪಾಡು

  ಇದರೊಳಗೆ ಏನಿದೆ ರಹಸ್ಯ ನಕ್ಕೆನು ನಾನು

ನನಗೆ ನೀನೆ ಒಂದು ಒಲುಮೆ ಹಾಡು" --- ಎಂದು ಕವಿ 'ಮೊದಲಸಲ ಕಂಡಾಗ' ಕವನದಲ್ಲಿ ಸ್ತ್ರೀ ಸಹಜ ಸಂಕೋಚ ...ಕೆಯ ಮೊದಲ ಭೇಟಿಯ ಹೆದರಿಕೆ, ಪಾಡು, ಸ್ತ್ರೀ ಸಹಜ ನಾಚಿಕೆ, ಸೇವಂತಿಗೆಯ ತೋಟದಲ್ಲಿ ಇಬ್ಬರ ಭೇಟಿ ಎಲ್ಲವನ್ನೂ ಕವಿ ...ಲ್ಪನೆಯಲ್ಲಿ ಚಿತ್ರಿಸುತ್ತಾರೆ.

'ನೀಬಳಿಗೆ ಬಂದಾಗ' ಕವನದಲ್ಲಿಯೂ ಪ್ರಿಯತಮೆಯು ಆಗಮನದಿಂದ ಪ್ರಿಯನ ತಳಮಳ, ಪ್ರಕೃತಿಯ ಸ್ವಾಗತ, ಹೃದಯ ...ರ್ಶಿ ಪ್ರೀತಿ ಎಲ್ಲವನ್ನೂ ಕಣ್ಣ ಮುಂದೆ ತಂದುಕೊಡುತ್ತಾರೆ. ಕವಿಗಳು ಮದುವೆಯ ದಿನ ಹಸೆಮಣೆ ಮೇಲೆ ವಧುವನ್ನು ಕರೆದು ...ಂದಾಗ ಆಗುವ ಮೊದಲ ಅನುಭವ, ಹೆಂಗಳೆಯರೆಲ್ಲ ಆರತಿ ಮಾಡಿ ಹೂವು ಮುಡಿಸುವ ಚಿತ್ರಣ ಸೊಗಸಾಗಿ ಮೂಡಿ ಬಂದಿದೆ. ...ಸ್ತುತ ಇಂದಿನ ಸಮಾಜದಲ್ಲಿ ಅದೇ ನಡೆಯುತ್ತಿರುವುದರಿಂದ ನೈಜತೆಗೆ ಬೆಲೆ ಬಂದಿದೆ ಎನ್ನಬಹುದು.

**"ಸಂಜೆ ಹಾಡು"** ಕವನ ಸಂಕಲನದಲ್ಲಿಯೂ ಕವಿ ಕೆ.ಎಸ್.ರವರ ನಲ್ಮೆಯ ರಾಗಸುಧೆ ಸಹಜವಾಗಿ ಹರಿದಿದೆ. ಮೈಸೂರು ಮಲ್ಲಿಗೆ, ಉಂಗುರ, ದೀಪದ ಮಲಿಯ, ರಾಗ ಲಹರಿ, ಒನಪು ವೈಯಾರ, ಬಿಂಕ, ರಸಘಟ್ಟಿ, ಇಲ್ಲಿಯೂ ತುಂಬಿ ಅಕ್ಷಯ ಪಾತ್ರೆಯಂತೆ ಓದುಗರ ನಿಧಿಯಾಗಿದೆ.

**ಹೇಗೆ ಮರೆಯಲಿ ಹೇಳು ?**
**ನಾ ನಿನ್ನ ಕಂಡಾಗ**
**ತಪ್ಪೇನಿಲ್ಲ**
**ಹತ್ತಿರವಿದ್ದು ದೂರ**
**ನಿನ್ನ ಪತ್ರ**
**ಇವಳು ನಿನ್ನವಳಲ್ಲ**
**ಇರುಳ ಹಾಡು**
**ನನ್ನ ಜೀವಕ್ಕೆ ನೀನು ಬಂದ ಪರಿಯನುನೆನೆದು**
**ದೀಪಾವಳಿಯ ಸಂಜೆ**
**ಗೆಳೆಯನಿಗೆ**
**ಕಾಯುವೆನು ಅವರಿಗಾಗಿ**
**ಇದು ಸೂಕ್ತ ಸಮಯ**
**ದೀಪಾವಳಿ 1999**
**ನಿಮಗಾಗಿತಂದಿರುವೆನು-------------**

ಹೀಗೆ ವಿವಿಧ ರೀತಿಯಲ್ಲಿ ಸ್ತ್ರೀ ಕಲ್ಪನೆಯು ಮೂಡಿ ಬಂದು ಓದುಗರ ಮುಂದೆ ಕವಿ ಯಶಸ್ವಿಯಾಗಿ ತಂದು ನಿಲ್ಲಿಸಿದ್ದಾರೆ. ನವಿಲ ದನಿ ಮತ್ತು ಸಂಜೆ ಹಾಡು ಈ ಎರಡು ಕವನ ಸಂಕಲನಗಳ ನಡುವೆ ಯಾವುದೇ ಮಹತ್ವದ ಬದಾಲವಣೆ ಬೆಳವಳಿಗೆಯಾಗಲೀ ಇಲ್ಲ. ಇಲ್ಲಿನ ಎಲ್ಲಾ ಕವಿತೆಗಳು ಅನುಭವ ಮತ್ತು ಅಭಿವ್ಯಕ್ತಿಗಳಲ್ಲಿ ಹೆಚ್ಚು-ಕಡಿಮೆ ಒಂದೇ ಆಗಿವೆ. ಈ ಸಂಜೆ ಹಾಡು ಸಂಕಲನದ ಕವಿತೆಗಳು ಹೇಳಿ ಬರೆಯಿಸಿದವು------------ ಹಿಂದಿನ ಸಂಕಲನಗಳಲ್ಲಿ ಪ್ರೌವೃತ್ತವಾದ ಮೊದಲಿನ ಅನುಭವಗಳೇ **"ಸಿದ್ದಪ್ರತಿಕ್ರಿಯೆ"** ಗಳಂತೆ ಕವನಗಳನ್ನು ಅಭಿವ್ಯಕ್ತಿ ಪಡೆದಿವೆ. ಆರಂಭದ ಕವಿತೆಗಳ ನೆನಪು ನಮಗಾಗುತ್ತದೆ.

ಶಿಲಾಲತೆ, ಮನೆಯಿಂದ ಮನೆಗೆ, ತೆರದಬಾಗಿಲು, ಹೊರತುಪಡಿಸಿದರೆ. ಉಳಿದ ಕಾವ್ಯದ ತುಂಬಾ ಮಲ್ಲಿಗೆಯದೇ ಮೆರವಣಿಗೆ. ಅದಕ್ಕೆ ಕವಿ " ನೀನು ಬಯಸಿದ ಹೂ ಇಲ್ಲಿ ಸಿಕ್ಕುವುದಿಲ್ಲ ಇರುವ ಹೂವನ್ನೇ ಮುಡಿದು ತೃಪ್ತಳಾಗು" (ನೀನು ಬಯಸಿದ ಹೂ) ಎಂದಿದ್ದಾರೆ. ಹೂವಿಗೂ ಚಲುವಿಗೂ, ಚೆಲುವಿಗೂ ಸ್ತ್ರೀಗೂ ಸಂಬಂಧಕಲ್ಪಸಿ ಮಾತಾಡುವುದು ಇಂತಹ ಪದ್ಯಗಳ ಇನ್ನೊಂದು ಗುಣ

**"ಪಟೇಲನ ಮಗಳು"** ಕವನದಲ್ಲಿ ನಿನ್ನಂತವರು ಇಲ್ಲಿ ಊರಿನೊಳಗೆ ಎಂದು ಉದ್ಗಾರ ತೆಗೆಯುವುದು ಕವಿಗೆ ಸಾಮಾನ್ಯ ಹೂ ಮುಡಿದ ಹೆಣ್ಣಿನ ಸಂಸ್ಕೃತಿಯನ್ನು ಸೃಷ್ಟಿಸುವುದೇ ಕೆ.ಎಸ್.ನ ರವರ ಉದ್ದೇಶ. ಕವಿಯ ಸೌಂದರ್ಯ ತತ್ವ, ಹೂ, ಹೆಣ್ಣು, ಹಾಡು, ಈ ಸಮೀಕರಣದಲ್ಲಿ ಅರ್ಥ ಪೂರ್ಣತೆಯನ್ನು ಪಡೆದುಕೊಂಡಿದೆ.

**" ಹೂ ಅರಳುವ ತನಕ ಕಾಯಬಲ್ಲೆನು ನಾನು**
**ಹೂವಿನ ವಿಳಾಸವನ್ನು ನಾನು ಬಲ್ಲೆ**
**ನೀನೊಮ್ಮೆ ನಕ್ಕಾಗ ಅರಳಿ ಬಿಡುವುದು ಹೂ**
**ಬರಿಯ ಹೂವಲ್ಲ, ಅದು ಸಿರಿ ಮಲ್ಲಿಗೆ"----------**

ಕವಿಯ ಸೌಂದರ್ಯ ತತ್ವ, ಹೂ - ಹೆಣ್ಣು- ಹಾಡು ಈ ಸಮೀಕರಣದಲ್ಲಿ ಅರ್ಥ ಪೂರ್ಣತೆ ಪಡೆದು ಪ್ರಿಯತಮೆ ನಕ್ಕರೆ ಹೂವೇ ಅರಳುತ್ತದೆ ಎಂದರೆ ಕೆ.ಎಸ್.ನ ರವರ ಕಲ್ಪನೆಯಲ್ಲಿ ಕಾವ್ಯದ ಹೆಣ್ಣು ಹೇಗೆ ಚೆಲುವಿನಿಂದ ರಂಜಿಸಿದ್ದಾಳೆ ಎಂದು ತಿಳಿಯಬಹುದು. ಜೀವನ ತತ್ವ, ಸೌಂದರ್ಯ ತತ್ವ, ಹೊಂದಿಕೊಂಡು ಅನುಭವ ಮತ್ತು ಕನಸುಗಳ ನಡುವೆ ನಿರೀಕ್ಷೆ ಇದೆ.

**"ಗೆಳೆಯನಿಗೆ"**ಕವನದಲ್ಲಿ ಪ್ರಿಯಕರಿನಿಗೋಸ್ಕರ ಕಾದಿರುವ ಪ್ರೇಯಸಿಯ ಕಲ್ಪನೆ ಇದೆ. ಸಹಜ ಹದಿ ವಯಸ್ಸಿನ ಪ್ರೀತಿ, ಇಲ್ಲಿ ಸೂರೆಗೊಂಡಿದೆ.

**"ನೂರು ಕನಸುಗಳಲ್ಲಿ ನಿನ್ನ ಕಂಡೆನು ನಾನು**
**ನನ್ನೆದೆಯೊಳು ಅಚ್ಚಾಯಿತು, ನಿನ್ನ ಹೆಸರು**
**ನೀನೆಂದು ಬರುವೆ ಓ ಗೆಳೆಯ ಉದ್ಯಾನದಲ್ಲಿ**
**ನೀ ಬರುವ ತನಕ ನಾ ಕಾದಿರುವೆನು"-------- (ಒಲವಿನ ವಿಜಯ)**

ಈ ಕವನದಲ್ಲಿಯೂ ಕವಿ ನಲ್ಲೆಯ ಕಲ್ಪನೆ ಏಕತಾನತೆ ತಂದರು ವಿಭಿನ್ನವಾದ ನಿಲುವಿನಲ್ಲಿ ಸ್ತ್ರೀಯ ಸಂವೇಧನೆಗಳ, ಮನೋಭಿಲಾಷೆಗಳ ಅರ್ಥವನ್ನು ಓದುಗರಿಗೆ ಮನಮುಟ್ಟುವಂತೆ ಕಟ್ಟಿಕೊಟ್ಟಿದ್ದಾರೆ. ಒಲವಿಗೆ ಎಂದಿಗೂ ಅಂತಿಮ ಜಯ ಎಂದು ಸಾರುವುದೇ ಕವಿಯ ಉದ್ದೇಶ.

**" ನೀನು ಆರದ ದೀಪ, ನಾನು ಬೀಸುವ ಗಾಳಿ**
**ಬಾಡಿಲ್ಲ ನೀ ಮುಡಿದ ಮೊಲ್ಲೆಯರಳು**
**ನಿನ್ನ ಚೆಲುವಿಗೆ ನಾನೇ ಮರುಳಾಗಿ ಬಂದಿಯೆನು**
**ನನ್ನ ಹೃದಯದ ತುಂಬ ನಿನ್ನ ಒಲವು"-------- ಎನ್ನುತ್ತ ಕವಿ**

ಪ್ರೀತಿಯ ಪ್ರೇಯಸಿಗೆ ಒಲವಿನ ರಸ, ಸುಧೆ, ತುಂಬಿಸಿ, ಹೃದಯದಲ್ಲಿ ಆಮಂತ್ರಣನೀಡುತ್ತಾರೆ. ನೀನು ಹಾಡದ ಹಕ್ಕಿ, ನಿನ್ನನ್ನೇ ಹುಡುಕಿದೇ, ನಿನ್ನ ಒಲವಿನ ವಿಜಯ ದೂರವಿಲ್ಲ. ಎಂದಾದರೂ ನಿನ್ನ ಗೆದ್ದೇ ಗೆಲ್ಲುತ್ತೇನೆ ಎಂಬ ವಿಶ್ವಾಸ ಕವಿಗಿದೆ. ಇಲ್ಲಿ ಸ್ತ್ರೀಯ ಒಲವಿನ ವಿಜಯವು ವಿಜೃಂಭಿಸಿದೆ.

**"ದೀಪಾವಳಿ-1999"** ರಲ್ಲಿಯೂ ಬೆಳಕಿನ ಹಬ್ಬ ದೀಪಾವಳಿ ದಿನದಂದು ವಿಶೇಷವಾಗಿ ಹೆಣ್ಣು ಮಕ್ಕಳ ಕೇಂದ್ರ ಬಿಂದು. ಅಲಂಕಾರಗೊಂಡ ಗೊಂಬೆಗಳಂತೆ ಕಂಗೊಳಿಸುತ್ತಾ ಸುತ್ತಿಲಿನ ಪರಿಸರವನ್ನೇ ಚೆಲುವಿಂದ ತುಂಬಿ ನೋಡುಗರಿಗೆ ಹಬ್ಬದ ರಸದೌತಣ ಉಣಿಸುವುದು ಹೆಣ್ಣು ಮಾತ್ರ. ಮುದುಕಿಯಾದರೂ , ಹುಡುಕಿಯಾದರೂ, ಸೊಸೆಯಾದರೂ ಪಟಾಕಿ ಹೊಡೆದು, ಸಂಬ್ರಮಿಸಿದಾಗಲೇ ಈ ಹಬ್ಬಕ್ಕೆ ಅರ್ಥ ಬರುವುದು. ಒಟ್ಟಾರೆ ಈ ಸಂಜೆ ಹಾಡು ಸಂಕಲನದಲ್ಲಿಯೂ ಸ್ತ್ರೀಯ ಕಲ್ಪನೆ, ಸ್ತ್ರೀಯ ಸಂವೇದನೆ, ಚೆಲುವಿಗೆ ಸಂಕೇತ, ಸ್ಫೂರ್ತಿಯಂತೆ ಮೂಡಿಬಂದಿದೆ.

**"ಇರುವಂತಿಗೆ" :-** ಈ ಕವನ ಸಂಕಲದಲ್ಲಿಯೂ ಹಲವು ರೀತಿಯಲ್ಲಿ ದಾಂಪತ್ರ ಪ್ರೇಮ, ಹೆಣ್ಣಿನ ಕಲ್ಪನೆ, ಪ್ರೇಮದ ಆವಿಷ್ಕಾರ ಸಮಾಜದಲ್ಲಿ ಪ್ರೀತಿಯ ವೈಬವೀಕರಣ, ಗಂಡ-ಹೆಂಡತಿಯರ ದಾಂಪತ್ಯ ಪ್ರೇಮ, ಸೊಗಸಾಗಿ ಮೂಡಿಬಂದಿದೆ.

| | |
|---|---|
| • **ಅಕ್ಕಿಯಾರಿಸುವಾಗ** | **ನಿನ್ನೊಲುಮೆ** |
| **ಕಾರಣ ಯಾರಿಗೆ ಗೊತ್ತು?** | **ಚಿಂತೆಗೆ ಕಣ್ಣ ತೆತ್ತವಳೇ** |
| **ನೀರಿಗೆ ಬಿದ್ದ ಹೆಣ್ಣು** | **ಶ್ರೀ ಕೃಷ್ಣ ನಂತೊಂದು ಮುಗಿಲು** |
| **ತೇರು ಬಂತು** | **ದಾರಿ** |
| **ದೀಪಾವಳಿ** | **ಶಿವರಾಮರಾಯರು** |
| **ದೂರ್ವಾಸರಿಗೆ** | **ಸೀತೆಯ ಭಾಗ್ಯ** |
| **ನಿನ್ನ ಹೆಸರು** | **ಈ ಶಿಕ್ಷೆ ಯಾರಿಗೆಂದು** |
| **ನನ್ ಚಿನ್ನ** | **ಎಳೆದು- ಎಳೆದೂ** |
| **ಇರುಳು** | **ನನ್ ಲಚ್ಮಿ-----------** |

ಈ ಎಲ್ಲಾ ಕವನಗಳಲ್ಲಿಯೂ ಕವಿ ಕೆ.ಎಸ್.ನರಸಿಂಹಸ್ವಾಮಿ ಯವರು ಬಹಳ ಸುಂದರವಾಗಿ ಹೆಣ್ಣಿನ ಮನೋಕಾಮನೆಗಳು, ಪುರುಷನ ಪ್ರೇಮ, ತುಂಬಿಬಂದಿದೆ. ರಮ್ಯ ಕಲ್ಪನೆಗಳಲ್ಲಿ ಹೆಣ್ಣಿನ ಪ್ರೇಮವನ್ನು ನಯನಾಜೂಕಿನಿಂದ ಓದುಗರಿಗೆ ರಸವತ್ತಾಗಿ ತುಂಬಿ ಕೊಟ್ಟಿದ್ದಾರೆ. ಆ ಮೂಲಕ ಹೆಣ್ಣಿನ ಮನಸ್ಸಿನ ಪ್ರತಿಬಿಂಬವನ್ನು ಸಮಾಜದ ಮುಂದೆ ತೋರಿಸಿದ್ದಾರೆ.

• **" ಅಕ್ಕಿಯಾರಿಸುವಾಗ ಚಿಕ್ಕ ನುಚ್ಚಿನ ನಡುವೆ**
**ಬಂಗಾರವಿಲ್ಲದೆ ಬೆರಳು**
**ತಗ್ಗಿರುವ ಕೊರಳಿನ ಸುತ್ತ ಕರಿಮಣಿಯೊಂದೆ**
ಸಿಂಗಾರ ಕಾಣದ ಹೆರಳು"-------- (ಅಕ್ಕಿಯಾರಿಸುವಾಗ)

ಮದುವೆಯಾಗಿ ಗಂಡನಮನೆಗೆ ಬಂದ ಹೆಣ್ಣು ತನ್ನ ಸಂಸಾರದ ಕೆಲಸ, ಕಾರ್ಯಗಳಲ್ಲಿ ತುಂಬು ಮನಸ್ಸಿನಿಂದ ತನ್ಮಯಳಾಗಿ ಮಾಡುವ ಕೆಲಸಗಳ ಬಗ್ಗೆ ಕವಿ ವರ್ಣಿಸಿದ್ದಾರೆ. ಹದಿನಾರರ ಬಾಲೆಯೊಬ್ಬಳು ವಿವಾಹವಾಗಿ ಗಂಡನ ಮನೆಯಲ್ಲಿ ಅಕ್ಕಿಯಾರಿಸುವಾಗ ಅವಳ ಅಂದ– ಚಂದದ ಬೆರಳಿನ ಬಗ್ಗೆ ವರ್ಣಿಸಿದ್ದಾರೆ. ಹೆರಳಿನ ಭಾರ, ತುಂಬಿರುವ ಕೆನ್ನೆ, ದೀಪದಂತೆ ಅರಳಿರುವ ಮುಂಗುರುಳು, ಬಳೆಯ ಸದ್ದು, ಕಡೆಗಣ್ಣನೋಟ, ಮನೆಗೆಲಸ ಸಾಕಷ್ಟು ಇದ್ದರು ಗೋಡೆ ಮೇಲಿನ ಚಿತ್ರದಂತೆ ಕುಳಿತು, ಹತ್ತು ಬೆರಳಿನಲ್ಲಿಯೂ ಹುಡುಕುತ್ತಿರುವುದು ಮನೋಜ್ಞವಾಗಿದೆ. ಇಲ್ಲಿ ಹೊಸ ವಧುವಿನ ಸ್ವಾರಸ್ಯ ಪೂರ್ಣ ಅಲಂಕಾರವಿದೆ.

- **" ಚಿನ್ನ ಸೆರಗಿನ ಮೇಲೆ ಅರಿಯದೇ ತಂಗಿದ**
  **ಜರತಾರಿ ಹೂವನು ಮರೆತು**
  **ತಲೆಯಿಟ್ಟು ತುಂಬು ದಿಂಬಿನ ಮೇಲೆ ಹಣೆಗಿಟ್ಟ**
  **ಕುಂಕುಮದ ಒತ್ತನು ಕುರಿತು"------- (ಕಾರಣ ಯಾರಿಗೆ ಗೊತ್ತು?)**

ಈ ಕವನದಲ್ಲಿ ಹೆಂಡತಿಯ ಸ್ಥಾನಕ್ಕಿಂತ ಮೊದಲು ತರುಣಿ ಅದರಲ್ಲೂ ವಿವಾಹ, ನಿಶ್ಚಿತಾರ್ಥ, ಆದ ಹೆಣ್ಣು ಮೊದಮೊದಲು ಹೇಗೆ ಕಾಣುತ್ತಾಳೆ, ಅವಳ ರೀತಿ– ನೀತಿಗಳು ಹೇಗೆ ಇರುತ್ತವೆ, ಅವಳ ಚಡ–ಪಡಿಕೆಗಳು ಹೇಗಿರುತ್ತವೆಂದು ಕವಿ ಕೆ.ಎಸ್.ನರಸಿಂಹಸ್ವಾಮೀಯವರು ತುಂಬಾ ಸ್ವಾರಸ್ಯಕರವಾಗಿ ಓದುಗರಿಗೆ ಮಧುರ ಅನುಭವಗಳನ್ನು ತುಂಬಿ ಕೊಟ್ಟಿದ್ದಾರೆ.

- **" ವೀಣೆಗೆ ತಂತಿಯ ಚಿಂತೆ, ತಂತಿಗೆ ತನ್ನ**
  **ಹುಡುಕುವ ಬೆರಳಿನ ಚಿಂತೆ**
  **ಬೆರಳಿಗೆ ಉಂಗುರುದ ಚಿಂತೆ, ಚಿಂತೆಗೆ ತನ್ನ**
  **ಮಡಿಲ ತುಂಬುವುದೊಂದೆ ಚಿಂತೆ---------(ಚಿಂತೆಗೆ ಕಣ್ಣ ತೆತ್ತವಳು)**

ಕವನದಲ್ಲಿ ಕವಿ ಕೆ.ಎಸ್.ನ ರವರು ವಿವಾಹವಾದ ಮೇಲೆ ದಾಂಪತ್ಯ ಪ್ರೇಮ ಅನಭವಿಸಿದ ಮೇಲೆ ಮುಂದಿನ ಒಂದು ಮಹತ್ವದ ಚಿಂತೆಎಂದರೆ ಮಕ್ಕಳ ಹಂಬಲ. ಕಂದನ ಅಗಮನದ ನಿರೀಕ್ಷೆಯ ಕಾಲ. ಸ್ವಲ್ಪ ತಡವಾದರೆ ಸಮಾಜದ ಬಾಯಿಗೆ ಕಿವಿಗೊಟ್ಟು ನೋವಿನ ಮೂಕರೋದನೆ ಮಾಡುವುದೇ ಆಗಿರುತ್ತದೆ. ಹೂ, ಅಲಂಕಾರ, ಕೆಲಸದಲ್ಲಿ ಉತ್ಸಾಹ ತೋರಿಸದಿರುವುದು, ಗಂಡನ ಮೇಲು ಒಲವು ಕಡಿಮೆಯಾಗುವುದು, ಉಲ್ಲಾಸ ಕಡಿಮೆಯಾಗಿ ಆತಂಕಕಾಣುವುದು----------- ಹೀಗೆ ನೂರಾರು ಚಿಂತೆಗಳು ತುಂಬಿ ಹೆಣ್ಣು ಬಯಸುವ ತಾಯ್ತನದ ಹಂಬಲದ ವಿಶೇಷ ಸ್ತ್ರೀ ಸಂವೇದನೆಗಳನ್ನು ತುಂಬಾ ಸೂಕ್ಷವಾಗಿ ಕವಿ ಚಿತ್ರಿಸಿದ್ದಾರೆ.

- **" ನೀರಿಗೆ ಬಿದ್ದ ಹೆಣ್ಣು, ಒಂದೇ ಮುಳುಗು ಮುಳುಗಿ**
  **ಕಂಡಿತ್ತು ಸಾವಿನ ಯುಗಾದಿ**
  **ಸುತ್ತೆಲ್ಲಾ ಕಿತ್ತು ಬಿದ್ದಿತ್ತು ಆಸೆಯ ಜೋಲಿ**
  **ತೆರೆದಿತ್ತು ಹುಡಿಮಣ್ಣಹಾದಿ"-------- (ನೀರಿಗೆ ಬಿದ್ದ ಹೆಣ್ಣು)**

ಕವನದಲ್ಲಿ ಕವಿ ಹೆಣ್ಣಿನಸಾವಿನ ಬಗ್ಗೆ ಚಿತ್ರಿಸಿದ್ದಾರೆ. ಮೊದಲ್ಲೆಲ್ಲಾ ನವ ವಧು, ಪತ್ನಿ, ಹೆಂಡತಿ, ತಾಯಿಯ ಪ್ರೀತಿ, ಅನುರಾಗಗಳನ್ನು ತೋರಿಸಿ, ಇಲ್ಲಿ ಸಂಸಾರದ ಕಣ್ಣಾದ ಹೆಣ್ಣಿನ ಸಾವು– ನೋವನ್ನು ತೋರಿಸಿದ್ದಾರೆ. ನೀರಿಗೆ ( ಕೆರೆ, ಬಾವಿ, ಕಾಲುವೆ) ಹಾರಿ ಬಿದ್ದು, ಪ್ರಾಣಬಿಟ್ಟ ಹೆಣ್ಣು ತಾವರೆಯ ಹೂವಾಗಲ್ಲಿಲ್ಲಾ, ಒಂದೇ ಮುಳುಗಿನಲ್ಲಿ ಸಾವಿನ ಲೋಕಕ್ಕೆ ಪಯಣಿಸಿದವಳು, ಗಂಡನಿಂದ ಚಿತೆಗೆ ಅಗ್ನಿಪ್ರಾಶನ ಮಾಡಿಸಿಕೊಂಡು ಬೆಂದು ಬೂದಿಯಾದಳು . ಆದರೆ ಆಕೆ ಸತ್ತರು ಗಂಡನ ಮರುವಿವಾಹಕ್ಕೆ ಸಿದ್ದತೆಯ ಮಾತುಗಳು ಈ ಸಮಾಜದಲ್ಲಿ ಸ್ತ್ರೀಕುಲದ ಹಣೆ ಬರಹಕ್ಕೆ ಮುನ್ನುಡಿಯಾಗಿದೆ. ಯಾರಿಗೂ ನಷ್ಟವಿಲ್ಲದ, ಹೊಸ ವಧುವಿನ ಹುಡುಕಾಟ ಹೀಗೆ ಹಲವಾರು ಕೌಟುಂಬಿಕ ಸಾಮಾಜಿಕ ಸಮಸ್ಯೆಗಳ ಸ್ತ್ರೀ ಸಂವೇದನೆಗಳು ಬಹಳ ಮಾರ್ಮಿಕ್ಯಯುತವಾಗಿ ಮೂಡಿಬಂದಿದೆ.

- " ಮಹಾಲಕ್ಷ್ಮೀ ಸೀತೆ, ಗಂಡಿಗೆ ಬಂದ ಸಂಶಯವೇ
ಹೆಣ್ಣಿಗೂ ಬಂದು ಒಂದೇ ಮಾತನಾಡಿದಳೇ?
ಲೋಕ ಸಮ್ಮತಿಯ ಬೇಡಿದಳೇ? ಹೂ ಬಾಡದಯೇ
ಬಂದು ನಿಂತಳು ನಗುತ ರಾಗವನು ಜೊತೆಗೆ----( ಸೀತೆಯ ಭಾಗ್ಯ)

ಕವಿ ಕೆ.ಎಸ್.ನ ರವರು ಸೀತೆಯಂತ ಸಾಧ್ವಿಮಣಿ ಪಟ್ಟಹಿಂಸಾತ್ಮಕ ಕರುಣಾಜನಕ ಕಥೆಯನ್ನು ಕೆಲವೇ ಸಾಲುಗಳಲ್ಲಿ ಹಿಡಿದ್ದಿಟ್ಟಿದ್ದಾರೆ. " ಸಾವಿರ ರಾಮರು ತೂಗುವರೇ ಇವಳ ತೂಕಕೆ"? ಎಂದು ಕವಿ ಪ್ರಶ್ನಿಸಿದ್ದಾರೆ.

ಒಟ್ಟಾರೆ ಇರುವಂತಿಕೆ ಕವನ ಸಂಕಲನದಲ್ಲಿಯೂ ಸಹ ಮೈಸೂರು ಮಲ್ಲಿಗೆ, ಉಂಗುರ, ದೀಪದ ಮಲ್ಲಿಯಂತೆ ನವೀರಾದ ದಾಂಪತ್ಯ ಪ್ರೀತಿ, ಲೋಕಕಲ್ಯಾಣ ಕಾರಕ ಪ್ರೀತಿ, ಸ್ತ್ರೀಯ ಸಂವೇಧನೆಗಳ ಹಲವು ಮುಖಗಳು ಅನಾವರಣಗೊಂಡಿದ್ದು, ಈ ಮೂಲಕ ಕವಿಯ ಒಳ ಮನಸ್ಸು ಸ್ತ್ರೀಯ ವೇದನೆ ಮತ್ತು ಸಂತಸಗಳನ್ನು ಹಂಚಿಕೊಂಡಿದೆ.

**"ಕೈ ಮರದ ನೆಳಲಲ್ಲಿ"** ಈ ಕವನ ಸಂಕಲದಲ್ಲಿನ ಕವಿತೆಗಳು ಬಹಳ ವಿಭಿನ್ನವಾಗಿ ಹೆಣ್ಣಿನ ಮನಸ್ಸನ್ನು ತೆರೆದಿಡುತ್ತವೆ. ಹಿಂದಿನ ಕವನ ಸಂಕಲಗಳಿಗಿಂತ ಇಲ್ಲಿ ಭಿನ್ನತೆ ಇದೆ. ಕೃತಿಯ ಶೀರ್ಷಿಕೆಗೆ ಕಾರಣವಾದ ಕೈ ಮರದ ನೆರಳಲಲ್ಲಿ ಕವನವು ಕವನ ಸಂಕಲನದ ಅರ್ಧಕ್ಕಿಂತ ಹೆಚ್ಚು ಭಾಗವನ್ನು ಆವರಿಸಿಕೊಂಡಿದ್ದು ದೀರ್ಘ ಕವನವೆನಿಸಿದೆ. ವಿವಿಧ ಮಜಲುಗಳಲ್ಲಿ ಹೆಣ್ಣಿನ ಕಲ್ಪನೆ ಸಾಗುವಂತೆ ನಿರೂಪಿತವಾಗಿರುವ ಈ ಕವನ ಮಾಸ್ತಿಯವರ ನವರಾತ್ರಿಯ ಕಾಥಾನಕವನ್ನು ನೆನಪಿಸುವಂತಹ ಹೊಸ ಸ್ವರೂಪ ಹೊಂದಿದೆ. ಇದು ಕಥನ ಕವನದ ಮೈಯನ್ನು ಭಾವಗೀತೆಯ ಆತ್ಮವನ್ನು ಪಡದಿರುವುದು ವಿಶೇಷ.

ಈ ಕವನದಲ್ಲಿ ಭಾಗ್ಯಮ್ಮ ಎಂಬ ಹೆಣ್ಣು ಮಗಳ ಕಥೆ ಬರುತ್ತದೆ. ಸುಂದರಿಗೆ ಗಂಡು ದೊರಕುವುದು ಹೀಗೆ ಹತ್ತು ಹಲವು ಹೆಣ್ಣಿನ ಗೋಳಿನ ಮುಖಗಳು ಇಲ್ಲಿ ಓದುಗರಿಗೆ ಕಾಣುತ್ತವೆ------- ನಲಿವಿಗಿಂತ ನೋವು, ಉತ್ಸಾಹಕ್ಕಿಂತ ವಿಷಾದವನ್ನು ಚಿತ್ರಿಸುವ ಇಲ್ಲಿನ ಕಥೆಗಳು ಜೀವನದ ಇನ್ನೊಂದು ಮಗ್ಗುಲಿನ ಮೇಲೆ ಸಮರ್ಥವಾಗಿ ಬೆಳಕು ಚೆಲ್ಲುತ್ತವೆ. ಮೈಸೂರು ಮಲ್ಲಿಗೆಯಲ್ಲಿ ನಾವು ಕಂಡ ಸೀಮೆಯಲ್ಲಿ ಕಾಣಿಸದೇ ಹೋಗಿದ್ದ ವಿಷಾದದ ಜಗತ್ತೊಂದನ್ನು ಅನಾವರಣ ಮಾಡುತ್ತವೆ.

"ಅನುಭವವೋ ಕನಸೋ " ಕವನದಲ್ಲಿ ಕವಿ ಮಗುವಾಗಿ ಅಳುತ್ತಿರುವಾಗ ತಾಯಿ ಬಂದು ಅಪ್ಪಿ ಹಾಲು ಉಣಿಸಿದ ದಿವ್ಯ ಕನಸೊಂದನ್ನು ಕವಿ ಕಂಡು

- ತಾಯಿ ಬಂದಳು ಬಳಿಗೆ ಎತ್ತಿಕೊಂಡಳು ಮಗುವ
ಅದರ ತುಟಿಯನ್ನಿಟ್ಟು ತನ್ನ ಮೊಲೆಗೆ
ಇರುಳು ಬೆಳೆಯಿತು ನನಗೆ ನಿದ್ದಯೇ ಬರಲಿಲ್ಲ
ಅನುಭವವೋ ಕನಸೋ ಇದು ತಿಳಿಯಲಿಲ್ಲ"---- (ಬರಗಾಗಿ)

ಇದು ನನಸೋ, ಕನಸೋ ಎಂದು ವಿಚಲರಾಗಿದ್ದಾರೆ. ನೋವಿನ ಆವರಣದಲ್ಲೂ ಮಿಂಚುವ ಮೂಗುತಿಯೇ ಹೊಳಪ್ಪನ್ನು ಕೆ.ಎಸ್.ನ ರವರು ಕಾವ್ಯ ನೋಡದೇ ಇರುವುದಿಲ್ಲ. ಚೆಲುವು ಒಂದು ಬಹಿರಂಗದ ಸಂಗತಿಯಾಗದೇ ಅಂತರಂಗದ ಅನುಭವ ಆಗುವುದರಿಂದ ಅವರ ಕಾವ್ಯ ಲೋಲುಪ್ತಿಯ ಕಾವ್ಯವೆಂದು ಕರೆಯಬಹುದು. ಆದರೆ ಅದೂ ಬದುಕಿನ ರಮ್ಯತೆಯನ್ನು ಒಡಿದಿಡಲು ನಡೆಸಿದ ಪ್ರಯತ್ನವಷ್ಟೆ, ಜೊತೆಗೆ ಅದರಿಂದ ದೊರೆತ ಸಂತೋಷದ ಲಾಭವನ್ನು ಮರೆಯುವಂತಿಲ್ಲ. ಜೀವನದ ಬಾಹ್ಯಾಂತರೀಕ ಸೌಂದರ್ಯಗಳೆರಡಕ್ಕೂ ಅಭಿವ್ಯಕ್ತಿ ಕೊಟ್ಟ ಕೀರ್ತಿ ಅವರ ಕಾವ್ಯದ್ದು,

**"ತೇರು"**ಕವನದಲ್ಲಿ ಜಾತ್ರೆಗಾಗಿ ಕುಟುಂಬ ಸಮೇತರಾಗಿ ಮಡದಿ ಮಗುವಿನೊಂದಿಗೆಸಂಭ್ರಮದಿಂದ ಹೊರಡುವ ರೀತಿ ಇದೆ. ಒಲವಿನ ಪತ್ನಿಗೆ ಊರ ದೇವರ ಜಾತ್ರೆಗೆ ಕರೆದುಕೊಂಡುಹೋಗುವ ಸಂಭ್ರಮವಿದೆ.

• " ನಿನ್ನ ಹೆರಳಿನ ತುಂಬ ನಾನು ಮಲ್ಲಿಗೆ ದಂಡೆ

ನಿನ್ನ ಕನ್ನಡಿಯಲ್ಲಿ ನನ್ನ ಕಂಡೆ

ಹಬ್ಬಿಕೊಂಡಿತು ಹಾಡು ನಿನ್ನ ಒಳದನಿಯಲ್ಲಿ

ನಿನ್ನ ಕರೆಯಿತು ಒಳವು ಚೆಲುವಿನಲ್ಲಿ---- ಎಂದು ಕವಿ ದಾಂಪತ್ಯದ ಪ್ರಣಯದ ಲೀಲೆ ಮೆರೆದಿದ್ದಾರೆ. ಪ್ರಿಯೆಯ ಪತಿಯ ಹೆರಳಿನ ತುಂಬ ನಾನೇ ಮಲ್ಲಿಗೆ ದಂಡೆಯಾಗಿರುತ್ತೇನೆ. ನಿನ್ನ ಕಣ್ಣುಗಳೆಂಬ ಕನ್ನಡಿಯಲ್ಲಿ ನನ್ನ ಬಿಂಬವೇ ಕಾಣುತ್ತದೆ. ನಿನ್ನ ಒಳದನಿಯಿಮದ ನಿನ್ನ ಹಾಡು ನಿನ್ನ ಚಲುವೆ ನನ್ನ ಕೈ ಬೀಸಿ ಕರೆದಿರುವಾಗ ಎಂದು ಹೆಣ್ಣಿನ ಪ್ರೀತಿಗೆ ಇರುವ ಆ ಸೆಳೆತವನ್ನು ಚಿತ್ರಿಸಿದ್ದಾರೆ.

**ಹೆರಿಗೆಯಾಸ್ಪತ್ರೆಯಲ್ಲಿ":-** ಕವನವು ಸಮಾಜದಲ್ಲಿ ಕುಟುಂಬದ ಬೆಳೆಯುವಿಕೆಗೆ ಕಣ್ಣಾಗಿ ಹೆಣ್ಣು ನಿಲ್ಲುವಳೆಂಬ ಸತ್ಯ ಚಿತ್ರಿಸಲಾಗಿದೆ. ಹೆರಿಗೆಯ ನೋವೇಷ್ಟಿದ್ದರು ಸಹಿಸಿ ಹೆಣ್ಣು ಚಿಗುರಿನ ಬಳ್ಳಿಯನ್ನು ಕೊಡುಗೆ ನೀಡುತ್ತಾಳೆ. ಗಂಡು ಮಗು ನೋಡಲು ಮಂಚದ ಹತ್ತಿರ ಬಂದಾಗ ಆಗುವ ಸಂತೋಷ ಇಲ್ಲಿ ತುಂಬಿದೆ.

• " **ಹೆರಿಗೆಯ ನೋವನೆ ಹಾಡುವಿರೇತಕೆ**

**ಪಕ್ಕದಲೇನಿದೆ ನೋಡಿ**

**ಒಲವಿನ ಬಳ್ಳಿಯ ಮುಟ್ಟುತ ನಿಟ್ಟುರಿಸಿರೆಳದಳು**

**ದೀಪವ ನೋಡುತ ರಾಣಿ**

**ರಾಯರು ಬಂದರು ಮಂಚದ ಹತ್ತಿರ**

**ಪೇಟವ ಕೈಯಲಿ ಹಿಡಿದು**

**ಹೇಗಿದೀಯ ಎಂದರು ರಾಯರು**

**ಮಂಚದ ಅಂಚನು ಮಿಡಿದು"**

**" ನಿನ್ನ ಒಲುಮೆ"** ಕವನದ ತುಂಬೆಲ್ಲಾ ಪ್ರಿಯೆಯ ಗುಣಗಾನವನ್ನೇ ತುಂಬಿದ್ದಾರೆ. ಅವಳ ಕೋಪ-ತಾಪವು ಕವಿಗೆ ಸುಂದರವಾಗಿ ಕಂಡಿದೆ. ' ನಿನ್ನ ಕೋಪವು ನನಗೆ ಚೆಲುವಾಗಿ ಕಾಣುತಿದೆ, ನಾನು ಕಾಮನಬಿಲ್ಲು, ನೀನು ಹೂಗಳ ಬಾಣ, ನಿನ್ನ ಚೆಲುವಿನಿಂದ ಋಷಿಯ ತಪವನ್ನೇ ಕೆಡಿಸಬಲ್ಲೆ, ಎದೆಯಾಳದಲ್ಲಿ ನೆನೆಸಿದ್ದ ಭಾವಗಳನ್ನು ವೀಣೆಯಲ್ಲಿ ಹಾಡಾಗಿ ನುಡಿಸಬಲ್ಲೆ. ಎಂದಿದ್ದಾರೆ.

• " ನನ್ನ ಜೊತೆಗೂ ಬಂದು ನಗುತ ನಿಂತೆ ಅದೇಕೆ

ಕಣ್ಣ ಹನಿಗಳ ಹಾರ ಒಲವು ನಲ್ಲೆ

ನಿನ್ನ ಕಂಬನಿಯೊರೆಸಿ ಕೆನ್ನೆಗೊತ್ತಿದ ಮುತ್ತು

ಅದೇ ಕವಿತೆ ಅದೇ ಭಾಗ್ಯ ನಾನು ಬಲ್ಲೆ------

- ಮರುಗು, ಮಲ್ಲಿಗೆ, ಜಾಜಿ, ರಾಶಿಬೀಳುವುದು
  ಒಳಗುಡಿಯ ದೇವರ ಮುಂದೆ
  ಎಡ ಹೆಗಲಮೇಲೆ ಮಗು ಬಲಗೈಲಿ ಹೆಂಡತಿ
  ದೇವರಿಗೆ ಕೈ ಮುಗಿದು ಬಂದು ಬಿಡುವರು---- ಎಂದು ಕವಿ

ಇದುವರೆಗೆ ಚೆಲುವನ್ನು ಉಣಬಡಿಸಿದ ಕವಿಗೆ ಸಮಾಜದಲ್ಲಿನ ಸಂಪ್ರದಾಯಗಳಿಗೆ, ಹಬ್ಬ-ಹರಿದಿನಗಳಿಗೆ ಹೆಣ್ಣು ತೆರೆದುಕೊಳ್ಳುವುದರ ಚಿತ್ರಣವಿದೆ.

**" ಬದುಕಿನ ಹಾಡು"** ಕವನದಲ್ಲಿ ಇಡಿ ಬದುಕಿನ ಕಥೆಗಳೆ ಕಣ್ಣಮುಂದೆ ಬರುತ್ತದೆ. ಪುರುಷನಾದವನು ಹೆಂಡತಿಯನ್ನು ಹೇಗೆ ಕಾಣಬೇಕು, ತಾಯಿಯನ್ನು ಹೇಗೆ ನೋಡಿಕೊಳಬೇಕೆಂಬುದರ ಬಗ್ಗೆ ಕಾಳಜಿಯ ಮಾತುಗಳಾಡಿದ್ದಾರೆ.

- "ಓಡದಿರು, ಎದುರಾದ ಸೇತುವೆಯ ದಾಟಿಬಿಡು
  ಮಡದಿ ಜೊತೆಯಲಿ ಇರಲಿ ಸಂತಸದಲಿ
  ಹೆಣ್ಣನ್ನು ಗೌರವಿಸು ನಿನ್ನ ತೈವಳು ಕಣೋ
  ಮಕ್ಕಳನ್ನು ಎತ್ತಿಕೋ ನಿನ್ನ ಭುಜಕ್ಕೆ"

**"ಎದೆ ತುಂಬ ನಕ್ಷತ್ರ" :**-ಕವನ ಸಂಕಲನದಲ್ಲಿ ಜೀವನದ ಚಿತ್ತಾರಗಳ ಹೋಯ್ದಾಟ ಬಿಂಬಿಸುವ ಕವಿತೆಗಳಿವೆ. ಕವಿ ಕೆ.ಎಸ್.ನ ರವರು ಸ್ತ್ರೀ ಸಂವೇಧನೆಯ ನಾನಾ ಮುಖಗಳನ್ನು ಚಿತ್ರಿಸಿದ್ದಾರೆ.

| | |
|---|---|
| **ಪೂರ್ಣಿಮ** | **ಬಳಿಗೆ ಬಂದ ಹೆಣ್ಣು** |
| **ಉಳಿಸಿಕೋ ನಿನ್ನೊಲವ** | **ನಿನ್ನ ನೆನಪು** |
| **ಸಾಂತ್ವನ** | **ಅಸ್ತ-ವೆಸ್ತ** |
| **ಹೆರಿಗೆ ಆಸ್ಪತ್ರೆಯಲ್ಲಿ** | **ತನ್ನ ಪಾಡಿಗೆ ತಾನು ಲೋಕದುರುಳು** |
| **ಹೊಸ ಕೆರೆಯ ಹಳ್ಳಿಯ ಹುಡುಗಿ** | **ಚಲುವು ದೇವರು** |
| **ನಿನ್ನ ಒಲುಮೆ** | **ಹರಕೆ** |
| **ಅವರ ಮಾತು** | **ಸಹಜ- ಅಸಹಜ** |
| **ಯಾರು ಹೊಣೆ** | **ಹಾಡಿನ ಅರ್ಥ** |
| **ಆಯ್ಕೆ** | **ನೆನಪುಬಾಡುವುದಿಲ್ಲ** |
| **ಕವಿತೆ** | **ನಿಶ್ಯಬ್ದ** |

ಹೀಗೆ ಹತ್ತಾರು ಕವನಗಳಲ್ಲಿ ಕವಿ ಸ್ತ್ರೀಯ ಸಂವೇಧನೆಯನ್ನು ಕಟ್ಟಿಕೊಟ್ಟಿದ್ದಾರೆ. ಕವಿ ಮೊದಲೇ ಹೇಳಿಕೊಂಡಂತೆ ಹೂ, ಹೆಣ್ಣು, ಚಿತ್ತಾರ, ಅಲಂಕಾರ, ಪ್ರೇಮ, ಪ್ರಣಯ, ಸೊಗಸುಗಳೇ ಕವನಗಳಲ್ಲಿದ್ದರು ಒಂದೊಂದರ ಆಶಯಗಳು ವಿಭಿನ್ನವಾಗಿವೆ. ಇಲ್ಲಿ ಹೆಣ್ಣಿನ ಕಲ್ಪನೆಯ ವಿವಿಧ ಮಜಲುಗಳಿವೆ. ತಾಯಿ, ಹೆಂಡತಿ, ನಲ್ಲೆ, ಕನಸಿನ ಕನ್ಯೆ, ಪ್ರೇಯಸಿಯಾಗಿ ಇಲ್ಲಿ ಸ್ತ್ರೀ ಕಂಗೊಳಿಸಿದ್ದಾರೆ. ಈ ಕವನಗಳ ಒಳಹೊಕ್ಕಿ ನೋಡಿದಾಗ ವೈವಿದ್ಯಮಯ ಪ್ರಪಂಚವೊಂದು ತೆರೆದುಕೊಳ್ಳುತ್ತದೆ.

" ಉಳಿಸಿಕೋ ನಿನ್ನೊಲವ" ಕವನದಲ್ಲಿ ಹೆಸರೇ ತಿಳಿಸುವಂತೆ ಪ್ರಿಯಕರನು ತನ್ನ ಪ್ರೇಯಸಿಗೆ ಶಾಶ್ವತವಾಗಿ ತನ್ನ ಪ್ರೇಯಸಿಗೆ ಈ ಜೀವನೋದ್ಧಾರಕ್ಕೂ ಪ್ರೀತಿಯನ್ನು ಉಳಿಸಿಕೋ ಶಾಶ್ವತವಾಗಿ ಕಾಯ್ದಿಡು ಎಂದು ಹೇಳುವ ಪರಿಯಿದೆ.

ಹೆಂಡತಿಯನ್ನು ಕೆದಕಿ ಕೇಳಿ ಹತಾಶನಾಗುವ ಗಂಏನ ಚಿತ್ರವಿದೆ. ಅವಳು ಮರಳಿ ಮರಳಿ ಉತ್ತರಿಸಿ ಸಾಕಗುವಳು, ಇನ್ನೂ ತಾನು ಉತ್ತರಿಸಲಾರೆ ಬಂದವರನ್ನೆ ಮತ್ತೆ ಬಂದಾಗ ಕೇಳಿರಿ ಎಂದು ತಾಕಿತು ಮಾಡುತ್ತಾಳೆ

- " ಕಂಡ ಹೆಣ್ಣಿನ ಮೇಲೆ ಕಣ್ಣೀಡದೆ ತೊಲಗೆಂದು
  ಬೆದರಿಸಿದ ಬಂಗಾರಿ ನಿನಲ್ಲ
  ನಡೆದ ದಿಕ್ಕಿಗೆ ನಿಂತ ನಿನ್ನನ್ನು ಕಂಡು
  ಕಣ್ಣ ತೇಲಿಸಿದವಳು ನಾನಲ್ಲ"...............(ಅಕ್ಕ–ತಂಗಿಯರ ಹಾಡು )

ಕವಿ ವಿಶೇಷವಾಗಿ ಹೆಣ್ಣು ಮಗಳು ತನ್ನ ಚಲುವನ ಗುಣಗಾನವನ್ನು ಮಾಡಿತ್ತಾ ಅಕ್ಕ–ತಂಗಿಯರೆ ಪರಸ್ಪರ ಇಬ್ಬರು ತಮ್ಮ ಗುಣನಡೆತೆಗಳ ವಿಶ್ಲೇಶಣೆಯಲ್ಲಿ ತೊಡಗಿರುವುದು ನಿಜಕ್ಕೂ ರಂಜನಿಯವಾಗಿದೆ. ಇಲ್ಲಿ ಕವನದ ಆಶಯ ಪೂರ್ಣ ನವ್ಯವಾಗಿಲ್ಲ ಎಂಬುದು ತನಗೆ ತಾನೆ ಹೊಳೆಯುವುದು.

- " ಬಳಿಗೆ ಬಾರದಿರೆಂದು ಬೆಂಡೋಲೆ ಬೆದರಿಸಿತು
  ಬೇಸಿರಿಯ ಮುತ್ತು ಬೇಸರಗೊಂಡು ಮಲಗಿಹಳು
  ಮುಡಿದ ಮಲ್ಲಿಗೆಯೊಂದೆ ನೊಂದಂತೆ ಮೆಲ್ಲಗೆ
  ನಿನ್ನಿಷ್ಟವೆಂದು ಬೆಳ್ಳಗೆ ನಕ್ಕೂ ವಿರಮಿಸಿತು".......... (ಉಮಾ)

ವಿಶೇಷವಾಗಿ ಈ ಕವನದಲ್ಲಿ ಕವಿ ಪತ್ನಿಯೇ ಸಾಕ್ಷಾತ್ ದೇವಿ ಸ್ವರೂಪ, ಅವಳ ಅಲಂಕಾರಿಕ ತೊಟ್ಟಿರುವ ವಸ್ತುಗಳೆ ಗಂಡನಿಗೆ ಹೆದರಿಸುವಂತಹ ಶಕ್ತಿ ಪಡೆದಿರುವಾಗ ಆಕೆಯಾ ಶಕ್ತಿ ಅಪಾರ ಎಂದು ತಿಳಿಸಿ ಬೆಂಡೋಲೆ, ಮಲ್ಲಿಗೆ, ಮುತ್ತುಗಳ, ಉಪಮೆಗಳು ನಿಜಕ್ಕೂ ಅರ್ಥಪೂರ್ಣವಾಗಿವೆ.

**"ಉಂಗುರ":–** ಈ ಕವನ ಸಂಕಲನದಲ್ಲಿಯೂ ಸ್ತ್ರಿಯ, ಪತ್ನಿಯ, ಪ್ರೇಯಸಿಯ, ಗೆಳತಿಯ, ಬದುಕಿನ ವಿವಿಧ ಮಜಲುಗಳನ್ನು ನವಿರಾಗಿ ವರ್ಣಿಸಿದ್ದಾರೆ.

| | |
|---|---|
| ಉಂಗುರ, | ಮನೆಗೆ ಬಂದ ಹೆಣ್ಣು |
| ಕಾಮನಬಿಲ್ಲು | ಮೈಕಾಲಬೆಟ್ಟದ ಹಾಡುಗಳಿಂದ |
| ಮಣಿಯಮ್ಮನ ಮದುವೆ | ಚಿತ್ರವಳ್ಳಿಯ ಚಲುವೆಯರು |
| ಗಾನಮಂದಿರದಲ್ಲಿ ಕಡೆಯ ಮಾತು | ಒಲುಮೆ ಒಲಿದೆ ಬರುವುದು |
| ಮುನಿಯದಿರು ಮಾನಿನಿಯೇ | ನಿನ್ನೋಲವಿಗೂ |
| ಮೇರೆಯಿಹುದು | ಬೆಚ್ಚಗಿದೆ ಹಚ್ಚ ಹಸುವಿನ ಹಾಲು ಒಳೆಯಲು |
| ಕಣ್ಣಾವುದು | ಬೆಚ್ಚಗಿದೆ ಹಚ್ಚ ಹಸುವಿನ ಹಾಲುಒಳಲೆಯಲಿ |

ಹೀಗೆ ಕವಿ ಹೆಣ್ಣಿನ ಮನೋಕಾಮನೆಗಳನ್ನು, ಪುರುಷನ ಪ್ರೀತಿ ವೈರಾಗ್ಯ, ಸಂಸಾರದೊಳಗಿನ ನೋವು ನಲಿವುಗಳು ಅದರಲ್ಲಿ ಹೆಣ್ಣಿನ ಪಾತ್ರ ಎಲ್ಲವನ್ನು ವೈಭವಿಕರಿಸಿ ಓದುಗರಿಗೆ ಮನಮುಟ್ಟುವಂತೆ ಕಟ್ಟಿಕೊಟ್ಟಿದ್ದಾರೆ.

- " ಆರೇಳು ವರುಷ ಸಂಸಾರ ಒಟ್ಟಿಗೆ ನಡೆದು
  ತೆಪ್ಪ ನಡುಹೊಳೆಗೆಬಂದಿಹುದು ಇಂದೇನಿವಳು
  ಬೇರೆ ಬೀದಿಯಲ್ಲಿ ಬೇರೊಂದು ಮನೆಯನ್ನು ಹುಡುಕಿ
  ಸಾಗಿಸಿರಿ ಪಾತ್ರೆ ಪರಟಿಯನು ನಿಲ್ಲೇನಿ ಇಲ್ಲಿ"............ಎಂದು

ಚಂಡಿಹಿಡಿಯುತ್ತಿರುವ ಹೆಂಡತಿಯ ಬಗ್ಗೆ, ಸಂಸಾರ ತಾಪತ್ರಯದ ಬಗ್ಗೆ ಕವಿ ಚಿತ್ರಿಸಿದ್ದಾರೆ. ಸಂಸಾರವೆಂದರೆ ಅದೊಂದು ನಿಜವಾದ ರಾಜ್ಯಾಂಗವೆ ಹಾಗಿದೆ ಎಂದಿದ್ದಾರೆ ತನ್ನ ತಮ್ಮನ ಹೆಂಡಿತಿ ಬೇರೊಂದು ಮನೆ ನೋಡಿದರೆ ಇವಳು ಹಿಡಿಸುತ್ತಿರುವುದು ತಮ್ಮನ ಪರಮ ಜ್ಞಾನತ್ವ, ತನ್ನ ತಾಯಿ ಇಂತಹ ಇಬ್ಬರು ಸೊಸೆಯರನ್ನು ಒಂದೆ ಮನೆಯಲ್ಲಿ ಬಾಳಿಸುವೇನೆಂದು ತಿಳಿದಿರುವುದು .ಹಿರಿಯಳಾದ ಆಕೆಯ ಮನಸ್ಸು ಮನೆಯೊಡೆಯಲು ಒಪ್ಪದಿರುವುದು, ಮನೆ ಹೊಲಗಳು ಹಿರಿಯರ ಆಸ್ತಿ ಅವನೆಂದೊ ಪಾಲಗಾಲು ಬಿಡನೆಂದು ಹೇಳುತ್ತಿರುದು, ಆಸೆಬುರುಕ ರಕ್ಕಸಿಯಾರಾದ ಈ

ಸೊಸೆಯರಿಗೆ ಹಂಚುವುದಿಲ್ಲವೆಂದು ಕೊರಗುತ್ತದ್ದಾಳೆ. ಈ ರಣರಂಗದಲ್ಲಿ ಹೆಣಾಗಾಡುತ್ತಿರುವುದು ಮನೆಗೆ ಹಿರಿಯ ಮಗನ ಮತ್ತು ಗಂಡನ ಸ್ಥಾನದಲ್ಲಿರುವುದರಿಂದ ಇಬ್ಬರ ಮಧ್ಯಯು ಅಡಕೆಯಂತೆ ಸಿಕ್ಕಿಹಾಕಿಕೊಂಡಿರುವುದರ ನೋವಿನ ಎಳೆಯನ್ನು ತಿಳಿಸಿ ಹೆಣ್ಣು ಹೇಗೆ ಮನೆಯ ಆಗು ಹೋಗುಗಳಿಗೆ ಪ್ರತಿ ಸ್ಪಂದಿಸುತ್ತಾಳೆ ಅವಳ ಸಂವೇದನೆಗಳ ತಾಕಲಾಟಗಳ ಬಗ್ಗೆ ಚಿತ್ರಿಸಿದ್ದಾರೆ.

- **" ಯವ್ವನದ ಬಲಿತ ಕಣ್ಣುಗಳ ತೆರದು ನೋಡೆನ್ನಾ**
  **ಚಳಿ ಹಗಲ ತುಂಬ ಬನವೆಲ್ಲಾ ಹೂಗಳ ತೊಟ್ಟು**
  **ಬೆಟ್ಟದೆದೆಯಿಂದ ಬೀಸುವ ಗಾಳಿ ಅಬ್ಬರಿಸಿ**
  **ಯವ್ವನದ ಬಲಿತ ಕಣ್ಣುಗಳ ತೆರದು ನೀನೆನ್ನ**
  **ಗೆದ್ದವನು ಬಾರೆನ್ನಾ ದೊರೆಯೆ"**..................ಕವಿ ಕೆ.ಎಸ್.ನರವರು ಇಲ್ಲಿ

ಯವ್ವನಭರಿತ ತರುಣಿಯು ತನ್ನ ಪ್ರೀಯಕರನನ್ನು ಮನಸಾರೆನ ಸ್ವೀಕರಿಸಲು ಕಾತರದಿಮದ ಕಾಯುತ್ತಿರುವ ಹಂಬಲವಿದೆ. ಅವನೆ ಅವಳ ದೊರೆ. ತನ್ನ ಪರೀಕ್ಷೆಗಳಿಂದ ಗೆದ್ದು ಬಂದವನೆ ನನ್ನ ಗಂಡ ಎಂದು ಹಂಬಲಿಸಿದ್ದಾಳೆ.

- **" ಮೊದಲದಿನ ಮೌನ ಅಳುವೆ ತುಟಿಗೆ ಬಂದಂತೆ**
  **ಚಿಂತೆ ಬಿಡಿ ಹೂವ ಮುಡಿದಂತೆ**
  **ಹತ್ತುಕಡೆ ಕಣ್ಣು ಸಣ್ಣಗೆ ದೀಪ ಉರಿದಂತೆ**
  **ಜೀವದಲಿ ಜಾತ್ರೆ ಮುಗುದಂತೆ"**............( ಮನೆಗೆ ಬಂದ ಹೆಣ್ಣು )

ಈ ಕವನದಲ್ಲಿ ಕವಿ ಹೊಸದಾಗಿ ಮದುವೆಯಾಗಿ ಗಂಡನಮನೆಗೆ ಬಂದ ಹೆಣ್ಣು ಮೊದಲ ದಿನ ಪತಿಯ ಗೃಹಕ್ಕೆ ಗೃಹಿಣಿಯಾಗಿ ಕಾಲಿಟ್ಟ ದಿನ ತನ್ನ ತವರನ್ನು ಬಿಟ್ಟು ಬಂದು ತನ್ನ ಸರ್ವಸ್ವವೇ ಗಂಡ ಎಂದು ನಂಬಿ ಬಂದಿರುವಾಗ ಮೌನವೇ ತುಂಬಿ ಅಳು ನುಗ್ಗಿ ಚಿಂತೆ ದುಃಖಗಳ ಸರಮಾಲೆ ಹಾಸಿದಂತೆ ಅವಳಿಗೆ ಹೊಸಪರಿಸರ ವಾತಾವರಣ ವಿಸ್ಮಯತೆ ತಂದಿದೆ. ಮುಂದೆನು ಎಂಬ ಚಿಂತೆ ನವ ವಧುವಾದ ಪತ್ನಿಗೆ ಬಂದಿರುವುದರ ಸೂಚನೆ ಇಲ್ಲಿದೆ.

ಎರಡನೆ ದಿನ ನಗು ತುಂಬಿದೆ, ಮೂಗುತ್ತಿ ಮಿಂಚುಹೊಳೆದಿದೆ, ನೀರೋಳಗೆ ವೀಣೆ ಮಿಡಿದಂತೆ ಹಾಡಿದ ಮಾತುಗಳು ಬರುತ್ತಿವೆ. ಮೂರನೆಯ ಸಂಜೆ ತಲೆ ತುಂಬ ಹೂ ಮುಡಿದಿ ಹೂವಿಗೂ ಜೀವ ತಂದಿದ್ದಾಳೆ, ಹುಣ್ಣಿಮೆ ಹಾಲಾಗಿ ಹರಿದಂತೆ ಹೊಸ ವಧುವಿನ ಶೃಂಗಾರ, ಪ್ರೀತಿ, ಒಡನಾಟದ ಬಗ್ಗೆ ಸ್ತ್ರೀತನ ರಂಗೇರಿರುವುದನ್ನು ಕಲ್ಪಸಿದ್ದಾರೆ.

- **" ಕಣ್ಣು ಹಾಯುವ ಹೆಣ್ಣು ಮಾಲತಿ, ಸರಸ್ವತಿಯೊ ದೇವತೆ**
  **ಸೀತೆಯ ಸೀಮೆಯ ಜಾಣೆ, ರಮೆಯೋ ಸಭೆಗಳಲ್ಲಿ ಸಂಭಾವಿತೆ**
  **ಪರಮ ಸುಂದರಿ ಪುಣ್ಯಮಂಜರಿ ಇನಿದನಿಯ ಭಾಗೀರತಿ**
  **ನನಗೆ ಇವರೋಳಗೆಲ್ಲ ಮೆಚ್ಚಿನ ಪಚ್ಚೆಯುಂಗುರ ಪಾರ್ವತಿ"**.......... ಕವಿ

ಚಿತ್ರವಳ್ಳಿಯ ಚಲುವೆಯರು ಕವನದಲ್ಲಿ ಯಾರೋ ದಿಲ್ಲಿ ಮೂಲದ ರಮಣಿಯರು ಹಳ್ಳಿಗೆ ಬಂದು ನೆಲೆಸಿದವರು ಸುತ್ತೆಲ್ಲಾ ಹಳ್ಳಿಗರ ಕಣ್ಣಿಗೆ ಭೂ ಲೋಕಕ್ಕೆ ಇಳಿದ ಅಪ್ಸರೆಯರಂತೆ ಕಂಗೊಳಿಸುತ್ತಿದ್ದಾರೆ. ಅವರು ಲಕ್ಷ್ಮಿ, ಸರಸ್ವತಿ, ಸೀತೆಯರಂತೆ ಉಜ್ವಲವಾಗಿದ್ದಾರೆ. ಅವರ ಹೆಸರುಗಳು ಮಾಲತಿ, ರಮೆ, ಭಾಗೀರತಿ ಅವರೊಳಗೆಲ್ಲಾ ಪಚ್ಚೆಯುಂಗುರದ ಪಾರ್ವತಿ ಇಷ್ಟ ಎಂದು ಸೌಂದರ್ಯಕ್ಕೆ ಮಾರು ಹೋಗಿರುವುದರ ಕವಿ ಕಲ್ಪನೆ ಸುಂದರವಾಗಿದೆ.

- **" ನಿನ್ನ ಚಲುವಿಗೆ ಮೇರೆ ನೀನೆ**
  **ಬಳಿಯಲ್ಲಿದ್ದು ಬೇರೆ ನಾನೆ**
  **ಬಾನಮೇರೆ ಬಾನೆ ತಾನೆ**
  **ನಿನ್ನೋಲವಿಗೂ ಮೇರೆ ಇರುವುದು**..........(ನಿನ್ನೋಲವಿಗೂ ಮೇರೆ ಇರುವುದು)

ಈ ಕವನದಲ್ಲಿ ಕವಿ ಹೆಣ್ಣಿನ / ಪತ್ನಿಯ / ಚಲುವೆಯ ಪ್ರೀತಿಯೆಂಬುದಕ್ಕೂ ಒಂದು ಮೇರೆ ಇರುತ್ತದೆ ಎಂಬ ಸತ್ಯ ನುಡಿದಿದ್ದಾರೆ. ಆಕೆಯೆ ತಾವು ಕಂಡ ಮೊದಲ ಹೆಣ್ಣಾಗಿ, ಮಡದಿಯಾಗಿ ಅವಳ ರೂಪು, ಲಾವಣ್ಯ, ಚಲುವು,

- “ ಎಲ್ಲರಂತೆಯೇ ನಾನು ನಿನ್ನ ಹೆರಳಿನ ತುಂಬಾ

  ಮಲ್ಲಿಗೆಯ ದಂಡೆಯನ್ನು ಮುಡಿಸಿ ನಿಂತೆ

  ಮುತ್ತೈದೆಯರು ಬಂದು ನಿನಗೆ ಕುಂಕುಮವಿಟ್ಟು

ಬೆನ್ನ ತಟ್ಟಿದಾಗ ಸಂತಸದಲ್ಲಿ” --- ಹೀಗೆ ಮದುವೆ ಸಂಭ್ರಮದಲ್ಲಿ ಕವಿ ತೇಲುತ್ತಾ ಓದುಗರನ್ನು ಸಂಭ್ರಮದಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದಾರೆ. ಅಂತೆಯೇ ಸಂಸಾರದ ನೋವುಗಳಲ್ಲಿ ನಲುಗುವ ಹೆಣ್ಣಿನ ಕಲ್ಪನೆಯನ್ನು ಕಣ್ಣುದುರಿಗೆ ತರುತ್ತಾರೆ. ಅವರ ಬೆಳಕು ಹರಿದಿತ್ತು ಕವನದಲ್ಲಿ ಹೊಸ ವಧು ಸಾವಿರಾರು ಕನಸುಗಳ ಕಟ್ಟಿಕೊಂಡು ಬಂದವಳು ಸಂಸಾರ ನೊಗಕ್ಕೆ ಸಿಕ್ಕಿ ನೊಂದುಕೊಳ್ಳುವ ಪರಿಯಿದೆ.

- “ ಹೊಂಗನಸ ಕಾಣುತ್ತಾ ಮನೆಗೆ ಬಂದಳು ಹೆಣ್ಣು

  ನಿಜವಾಗಲಿಲ್ಲ ಅವುಗಳಲ್ಲಿ ಒಂದೂ

  ತನ್ನ ಕಂದನ ಜರಿದು ನೆರಮನೆಯ ಕಂದನನ್ನು ಹೊಗಳುವರು ಇದ ಕೇಳಿ

  ನೊಂದಳವಳು” ---

ಎಂದು ಕವಿ ನೋವನ್ನು ಚಿತ್ರಿಸುತ್ತಾರೆ. ಎಷ್ಟೇ ಕಹಿಇದ್ದರೂ ಹೆಣ್ಣು ಸಹಿಸಿಕೊಂಡು ಗಂಡಿಗೆ ಪ್ರೀತಿಯನ್ನೇ ಧಾರೆಯೆರೆಯುತ್ತಾಳೆ ಎಂದು ಆಶಿಸುತ್ತಾರೆ.

ಅಂತೆಯೇ ತಾಯಾಗಿ ಹೆಣ್ಣಿನ ಪ್ರೀತಿ ಅಮೂಲ್ಯವಾದುದು ಕವಿಯು ಎಲ್ಲೆಡೆಯಲ್ಲೂ ತಾಯಿಗಾಗಿ ಹಂಬಲಿಸುವ ಪರಿ ಅವಳ ಪ್ರೀತಿಗಾಗಿ ಹಾತೊರೆಯುವ ಹೃದಯ ಅಮೃತ ಮಯವಾಗಿದೆ.

- “ ತಾಯ ಸೆರಗನ್ನು ಹಿಡಿದು ಎಳೆದಾಗ ಕೇಳಿಸಿತು

  ದೂರದಲಿ ನಿನ್ನೊಂದು ಸಿಂಹನಾದ

  ತಾಯ ಕೊರಳಲ್ಲಿ ಮಾಂಗಲ್ಯ ಮಿಂಚಿತು”

ಈಗ ಅವಳ ಮಾತೆ ನನಗೆ ಎಲ್ಲ ವೇದ --- ಎಂದು ಕವಿ ತಾಯಿಯ ಮಾತೆ ವೇದವಾಕ್ಯ, ಜನನಿ ಜನ್ಮ ಭೂಮಿಶ್ಚ ಎಂದು, ತಾಯಿಯೇ ಮೊದಲ ಗುರು, ತಾಯಿಯೇ ಮೊದಲ ದೈವ ಎಂದು ಸಾರಿದ್ದಾರೆ. ಒಟ್ಟಾರೆ ಹೆಣ್ಣು ನಲ್ಲೆ, ತಾಯಿ, ಮಾತೃ ಸ್ವರೂಪಿಣಿ, ಅವಳಿಂದಲೇ ಈ ಜಗತ್ತೆಂದು ಕಳಕಳಿಯಿಂದ ನುಡಿದಿದ್ದಾರೆ.

• “ ನಿನ್ನ ಹೆರಳಿನ ತುಂಬ ನಾನು ಮಲ್ಲಿಗೆ ದಂಡೆ

ನಿನ್ನ ಕನ್ನಡಿಯಲ್ಲಿ ನನ್ನ ಕಂಡೆ

ಹಬ್ಬಿಕೊಂಡಿತು ಹಾಡು ನಿನ್ನ ಒಳದನಿಯಲ್ಲಿ

ನಿನ್ನ ಕರೆಯಿತು ಒಳವು ಚೆಲುವಿನಲ್ಲಿ---- ಎಂದು ಕವಿ ದಾಂಪತ್ಯದ ಪ್ರಣಯದ ಲೀಲೆ ಮೆರೆದಿದ್ದಾರೆ. ಪ್ರಿಯೆಯ ಪತಿಯ ಹೆರಳಿನ ತುಂಬ ನಾನೇ ಮಲ್ಲಿಗೆ ದಂಡೆಯಾಗಿರುತ್ತೇನೆ. ನಿನ್ನ ಕಣ್ಣುಗಳೆಂಬ ಕನ್ನಡಿಯಲ್ಲಿ ನನ್ನ ಬಿಂಬವೇ ಕಾಣುತ್ತದೆ. ನಿನ್ನ ಒಳದನಿಯಿಮದ ನಿನ್ನ ಹಾಡು ನಿನ್ನ ಚಲುವೆ ನನ್ನ ಕೈ ಬೀಸಿ ಕರೆದಿರುವಾಗ ಎಂದು ಹೆಣ್ಣಿನ ಪ್ರೀತಿಗೆ ಇರುವ ಆ ಸೆಳೆತವನ್ನು ಚಿತ್ರಿಸಿದ್ದಾರೆ.

**“ಹೆರಿಗೆಯಾಸ್ಪತ್ರೆಯಲ್ಲಿ”:-** ಕವನವು ಸಮಾಜದಲ್ಲಿ ಕುಟುಂಬದ ಬೆಳೆಯುವಿಕೆಗೆ ಕಣ್ಣಾಗಿ ಹೆಣ್ಣು ನಿಲ್ಲುವಳೆಂಬ ಸತ್ಯ ಚಿತ್ರಿಸಲಾಗಿದೆ. ಹೆರಿಗೆಯ ನೋವೇಷ್ಟಿದ್ದರು ಸಹಿಸಿ ಹೆಣ್ಣು ಚಿಗುರಿನ ಬಳ್ಳಿಯನ್ನು ಕೊಡುಗೆ ನೀಡುತ್ತಾಳೆ. ಗಂಡುಮಗು ನೋಡಲು ಮಂಚದ ಹತ್ತಿರ ಬಂದಾಗ ಆಗುವ ಸಂತೋಷ ಇಲ್ಲಿ ತುಂಬಿದೆ.

• “ ಹೆರಿಗೆಯ ನೋವನೆ ಹಾಡುವಿರೇತಕೆ

ಪಕ್ಕದಲೇನಿದೆ ನೋಡಿ

ಒಲವಿನ ಬಳ್ಳಿಯ ಮುಟ್ಟುತ ನಿಟ್ಟುರಿಸಿರೆಳದಳು

ದೀಪವ ನೋಡುತ ರಾಣಿ

ರಾಯರು ಬಂದರು ಮಂಚದ ಹತ್ತಿರ

ಪೇಟವ ಕೈಯಲಿ ಹಿಡಿದು

ಹೇಗಿದೀಯ ಎಂದರು ರಾಯರು

ಮಂಚದ ಅಂಚನು ಮಿಡಿದು”

**“ ನಿನ್ನ ಒಲುಮೆ”** ಕವನದ ತುಂಬೆಲ್ಲಾ ಪ್ರಿಯೆಯ ಗುಣಗಾನವನ್ನೇ ತುಂಬಿದ್ದಾರೆ. ಅವಳ ಕೋಪ-ತಾಪವು ಕವಿಗೆ ಸುಂದರವಾಗಿ ಕಂಡಿದೆ. ‘ ನಿನ್ನ ಕೋಪವು ನನಗೆ ಚೆಲುವಾಗಿ ಕಾಣುತಿದೆ, ನಾನು ಕಾಮನಬಿಲ್ಲು, ನೀನು ಹೂಗಳ ಬಾಣ, ನಿನ್ನ ಚೆಲುವಿನಿಂದ ಋಷಿಯ ತಪವನ್ನೇ ಕೆಡಿಸಬಲ್ಲೆ, ಎದೆಯಾಳದಲ್ಲಿ ನೆನೆಸಿದ್ದ ಭಾವಗಳನ್ನು ವೀಣೆಯಲ್ಲಿ ಹಾಡಾಗಿ ನುಡಿಸಬಲ್ಲೆ. ಎಂದಿದ್ದಾರೆ.

• “ ನನ್ನ ಜೊತೆಗೂ ಬಂದು ನಗುತ ನಿಂತೆ ಅದೇಕೆ

ಕಣ್ಣ ಹನಿಗಳ ಹಾರ ಒಲವು ನಲ್ಲೆ

ನಿನ್ನ ಕಂಬನಿಯೊರೆಸಿ ಕೆನ್ನೆಗೊತ್ತಿದ ಮುತ್ತು

ಅದೇ ಕವಿತೆ ಅದೇ ಭಾಗ್ಯ ನಾನು ಬಲ್ಲೆ------

ಕವಿ ತನ್ನ ಮೊದಲ ಭೇಟಿ, ಪ್ರೇಮ ಪ್ರಯಣ ನೆನಪು ತರಿಸಿದ್ದಾರೆ ಹಾಗೆಯೇ ‘ ಅವರ ಮಾತು’ ಕವನದಲ್ಲಿಯೂ ಹೊಳೆದಂಡೆ, ಪ್ರೇಯಸಿ, ದೇಗುಲದ ಹತ್ತಿರ, ನಿಹಾರಿಕೆಗಳ ನಡುವೆ ಜೇನಿನಂತ ಮಾತುಗಳೆಂದು ರಸ ತುಂಬಿ ನಲ್ಲೆಯನ್ನು ಹೊಗಳಿದ್ದಾರೆ. ಮುಡಿದ ಹೂವನ್ನು ಮುಟ್ಟಿಕೊಂಡು ಹತ್ತಿರ ಬಾರೆ ಎಂದು ಶೃಂಗಾರವಾಗಿ ರಸ ಉಕ್ಕಿಸದ್ದಾರೆ.

'ಬಳಿಗೆ ಬಂದ ಹೆಣ್ಣು' ಕವನದಲ್ಲಿಯೂ ಹತ್ತಿರ ಒಯ್ಯಾರವಾಗಿ ಸುಳಿದಾಡಿದ ಪ್ರೇಯಸಿಯನ್ನ ನೆನ್ನೆ ದಾರಿಯಲ್ಲಿ ಏನು ಕಂಡೆ ಹೇಳು ಬಾರೆ ಹೆಣ್ಣೆ ನಿನ್ನ ಕಿವಿಗೆ ಬಿದ್ದ ಹಾಡು ಯಾವುದು? ನೀನು ಕಂಡ ನೋಟವೇನೆಂದು ತಿಳುಸುಬಾ ಎಂದಿದ್ದಾರೆ. ಹಾಗೆಯೇ 'ನಿನ್ನ ನೆನಪು ಕವನದಲ್ಲಿಯೂ ಎಂದು ಹಾಡಿದ ಪ್ರೀತಿ ಮಾತುಗಳನ್ನು ಕವಿ ಈಗ ನೆನೆದಿದ್ದಾರೆ.

- **" ನೆನಪಿನಂಗಳದಲ್ಲಿ ನೀನು ನಂದಾ ದೀಪ**

  **ಯಾವ ಗಾಳಿಗೂ ದೀಪ ಅಲುಗದಿಹುದು**

  **ನಿನ್ನ ನಗೆ ದೂರ ಹೋದಂತೆಲ್ಲ ಕರೆಯುತಿದೆ**

  **ಚೆಲುವ ಕಣ್ಣಿನ ಬೆಳಕು ನಿನ್ನ ಒಲವು------**

ಎಂದು ಕೆ.ಎಸ್.ನ ಪ್ರಿಯತಮೆ ನೆನಪು ಹೃದಯದಲ್ಲಿ ಎಂದು ಆರದ ನಂದಾದೀಪವಾಗಿದೆ. ಅದು ಯಾವ ಬಿರುಗಾಳಿ ಬಂದರು ಅಲುಗುವುದಿಲ್ಲ. ಅವಳ ಕಣ್ಣಿನ ಬೆಳಕು ಒಲವಾಗಿ ಹರಿದಿದೆ. ಅವಳ ನಗೆ ದೂರ ಹೋದಂತೇಯೂ ನನ್ನ ಕೈ ಬೀಸಿ ಕರೆವುದೆಂದು ಕವಿ ಹೇಳಿದ್ದಾರೆ. ಇಲ್ಲಿಯೂ ಹೆಣ್ಣಿನ ಕಲ್ಪನೆ ಚಲುವಿನ ಚಿತ್ತಾರವಾಗಿ ತುಂಬಿ ಬಂದಿದೆ.

ಕೆ.ಎಸ್.ನ ರವರ 'ಚೆಲುವು- ದೇವರು' ಕವನವು ಸಹ ಸಹಜವಾಗಿ ಕವಿಯ ಸ್ತ್ರೀ ಪ್ರೇಮ, ಚೆಲುವು ಒಲವು ಎರಡು ಸೇರಿ ಹೇಗೆ ದೇವರ ಪಾದಕ್ಕೆ ಪ್ರೀತಿ ಅರ್ಪಿತವಾಗುತ್ತದೆಂದು ಧ್ವನಿಸುತ್ತದೆ.

- **" ಚೆಲುವೆ ಕಾದಿದ್ದಾಳೆ ತನ್ನ ನಲ್ಲನಿಗಾಗಿ**

  **ಅಕ್ಷಿಷ್ಠ ಮುಚ್ಚಿಹುದು ಅವಳ ಸೀರೆ**

  **ಬತ್ತಲೆಯ ಬೆಟ್ಟ ತಂಬೆಲರಲ್ಲಿ ಕಾಯುತಿರೆ**

  **ಪಶ್ಮಿಮದ ಕಡೆಯ ಬಿರುಗಾಳಿಗಾಗಿ"--------** ಈ ಕವನದಲ್ಲಿಯೂ ಕವಿ ಚೆಲುವೆಯ

ಮನದಾಳದ ಪ್ರೀತಿಯ ಹೊಂಗಿರಣವನ್ನು ಸೇರಿಸಿ, ಬದುಕಿಗೆ ಹೊಸಮುನ್ನುಡಿ ಬರೆಯಲು ಕಾತರಿಸುತ್ತಿರುವ ಗ್ರಹಿಣಿಯ ಪ್ರೇಯಸಿಯ ಚಿತ್ರಣವನ್ನು ನೀಡುತ್ತಾರೆ.

**" ಮೌನದಲಿ ಮಾತ ಹುಡುಕುತ್ತಾ":-** ಈ ಕವನ ಸಂಕಲನದಲ್ಲಿಯೂ ಕವಿಯ ಸ್ತ್ರೀತನದ ಭಾವದೀಪ್ತಿಯ ನೆರಳು ಹರಿದಾಡಿದೆ. ಇಲ್ಲಿ ಕವಿ ಒಲವಿನಾಳಕ್ಕೆ ಇಳಿದು ಶೋಧಿಸಿದ್ದಾರೆ. ಇದು ಅವರ ಅನ್ವೇಷಣೆ ಕವನದಲ್ಲಿಯೂ ಬಿಂಬಿತವಾಗಿದೆ. ಮೈಸೂರು ಮಲ್ಲಿಗೆ, ಶಿಲಾಲತೆ, ಉಂಗುರ ಕವನಸಂಕಲಗಳಲ್ಲಿಯಂತೆ ವಿಶೇಶವಾದ ದಾಂಪತ್ಯಗೀತೆಗಳೇ ಇಲ್ಲಿಲ್ಲ. ಬದುಕಿನ ವಿವಿಧ ಸ್ಥರಗಳಲ್ಲಿ ಒಲವು ಹೇಗೆ ಅರಳಿದೆ ಎಂದು ಚಿತ್ರಿಸಿದ್ದಾರೆ. ಈ ಮೂಲಕ ಸ್ತ್ರೀಕಲ್ಪನೆಯ ವಿವಿಧ ರೂಪ ನಮ್ಮ ಕಣ್ಮುಂದೆ ತಂದು ಕೊಡುತ್ತಾರೆ.

**" ಅತಿಥಿ"** ಕವನದಲ್ಲಿ ಶ್ರಾವಣದ ಸಂಜೆ ಪ್ರಿಯತಮೆಯನ್ನು ಕಂಡಾಗ ಆದ ಅನುಭವ ಹೇಳಿಕೊಂಡಿದ್ದಾರೆ. ಇಬ್ಬರು ಪರಸ್ಪರ ನೋಡಿಕೊಂಡ ಭಾವ ಪ್ರಪಂಚದ ತನ್ಮಯತೆಯ ತೋಟದಲ್ಲಿ ವಿವಿರಿಸಿದ ಅನುಭವವನ್ನು ರಾಗ ಲಹರಿಯಾಗಿ ಹರಿಸಿದ್ದಾರೆ.

- **" ಎಲ್ಲೆಲ್ಲೂ ಮೌನ ನಿಶ್ಯಬ್ದತೆಯ ಹೆಜ್ಜೆಗಳು**

  **ಮೌನ ಆವರಿಸಿತ್ತು ಮೇಳದಲ್ಲಿ**

  **ಬಂಗಾರದುಂಗುರವ ನನ್ನ ಕೆನ್ನೆಗೆ ಒತ್ತಿ**

  **ನಾನು ಸುಮ್ಮನೆ ನಿಂತೆ ಮೌನದಲಿ-----** ಎಂದು ಕವಿ ಹೇಳುತ್ತಾ ಸಾಗುತ್ತಾರೆ. ಹಾಗೆಯೇ

ಹೂ, ಹೆಣ್ಣು ಕವನದಲ್ಲಿಯೂ ಒಲವು-ಚೆಲುವು ಹಾಡಾಗಿ ಹರಿದಿದೆ. ಹೂ ಮುನ್ನುಡಿ ನನ್ನ ಎಲ್ಲಾ ಕವಿತೆಗೆ ಎಂದು ಸಾರಿದ್ದಾರೆ.

• " ಹೂವೆ ಮುನ್ನುಡಿ, ನನ್ನ ಎಲ್ಲಾ ಕವಿತೆಗೆ, ಕತೆಗೆ
ಹೂವ ಸಹವಾಸವನ್ನು ಮರೆಯಲಾರೆ"

"ಮಾಘ ಮಾಸದ ಗಾಳಿ ತಂಪಾಗಿ ಬೀಸಿತ್ತು
ನಾನಂತು ಒಲವನ್ನು ಮರೆಯಲಾರೆ "



" ಗಿಡದ ಹೂಗಳಲ್ಲಿ ಚೆಲುವಿನಾವರಣದಲ್ಲಿ
ಅವಳಿತ್ತ ಮುತ್ತೊಂದು ಬೆಚ್ಚಗಿತ್ತು."

ನಾ ನಿನ್ನ ನನೆದರೆ "ಒಲವು" ಕವನಗಳಲ್ಲಿ ಶ್ರೀ ಕಲ್ಪನೆ ಸುಂದರವಾಗಿ ಮೂಡಿ ಬಂದಿರೆ ಚಲುವೆನೊಳಗೆ ಒಲವನ್ನು ಕಂಡು ಒಲವಿನೊಳಗೆ ನನ್ನನೆ ಕಂಡೆ ಕೋಗಿಲೆಯ ಹನಿಯಂತೆ ನಿನ್ನ ದ್ವನಿ ಎಂದಿದ್ದಾರೆ ಹಾಗೆಯೆ "ಭೃಂಗ" ಸರೋವರ ಕನನಗಳಲ್ಲಿರುವ ಕವಿ ತೆಳೆಗೆ ಬೆಳ್ಳಗಿರುವ ಚಲುವೆಯ ಒಡನಾಟಕ್ಕೆ ಪುರುಷ ಸೋಲುವ ರೀತಿ ಚಿತ್ರಿಸಿದ್ದಾರೆ ಕವಿತಮ್ಮ ಬೆಳಗಾಗುವುದೇ ಬೇಡ " ಗೆ" ಅರ್ಧಾಂಗಿಗೆ ಕವನಗಳಲ್ಲಿಯು ಪ್ರೀತಿಯ ಬಲೆ ಹೇನಿಸಿದ್ದಾರೆ ಅರ್ಧಂಗಿಗೆ ಕವನದಲ್ಲಿ ಪ್ರೇಯಿಸಿಯಿಂದ ಪತ್ನಿಗೆ ಸಂಪೂರ್ಣವಾಗಿ ಶರಣಾಗಿದ್ದಾರೆ.



• " ಗೋಧಿ ಹೊಲಗಳ ನಡುವೆ ಮೊದಲ ಸಲ ಕಂಡಾಗ
ನನಗೆ ತಿಳಿದರಲ್ಲು ನಿನ್ನ ಒಲುಮೆ
ಒಲುಮೆ ಗಾಳಿಯ ಹಾಗೆ ಇದೆ ಕಾಣಿಸುವುದಿಲ್ಲ
ಬಣ್ಣ ಬಣ್ಣದ ಒಲುಮೆ ನಿನ್ನ ಒಲುಮೆ...

ಎಂದು ಕವಿ ಗೋಧಿ ಹೊಲಗಳ ನಡುವೆ ಮೊದಲ ಬಾರಿಗೆ ಪತ್ನಿಯಾಗುವವಳನ್ನು ಕಂಡಾಗ ಆಗಿದ್ದ ತಲ್ಲಣವನ್ನು ಬರೆದಿದ್ದಾರೆ. ಕವಿಯ ಕಲ್ಪನೆಯ ಕಣ್ಣಿಗೆ ಕಂಡ ಚಲುವೆಯ ತಲೆ ತಗ್ಗಿಸಿ ನಂತರ ನಗು ನಗುತ ನಿಂತ ಪರಿ ಅರ್ಧಾಂಗಿಯ ಒಲುಮೆಯ ಗಾಢತೆ ಕೈ ಬೀಸಿ ಬನ್ನಿ ಎನ್ನುವ ವಿಶೇಷ ಅನುಭಕ್ಕೆ ಕವಿ ಮಾರು ಹೋಗಿದ್ದಾರೆ_... ಹಾಗೆ ಅವರ "ದೋಣಿ ತುಂಬ ಹುಡುಗಿಯರು ಕವನದಲ್ಲಿಯು ಹೂವ ಮುಡಿದ ಬರಿದ ಗೆಳತಿಯರು ಬೈತಲೆ, ಶೃಂಗಾರಗಳಲ್ಲಿ ಮೂಗುತಿ, ಕಾಡಿಗೆ ಕನ್ನಡಿಯಲ್ಲಿ ನೋಡಿಕೊಳ್ಳುವ ಬಿನ್ನಾಣವನ್ನು ಕವಿ ಇಲ್ಲಿ ಮನದಟ್ಟಾಗುವಂತೆ ಬೆಳಗಿಸಿದ್ದಾರೆ. ಸ್ರೀಯ ವಿವಿಧ ಕಲ್ಪಸಿ ಇಲ್ಲಿ ಚಿತ್ತಾರರಂತೆ ಮೂಡಿದೆ ... ಹಾಗೆಯೆ ಹೆಣ್ಣು ಸಹಜವಾಗಿ ತನ್ನ " ಗೆಳಯನಿಗೆ" ಕವನದಲ್ಲಿ ಬರೆದ ಒಲುಮೆಯ ಪತ್ರವಿದೆ.

• "ಚಲುವಿನರಾಧನಗೆ ಸಿದ್ದವಾಗಿರು ನೀನು
ನಿನ್ನ ಹಾಡೇ ನನಗೆ ಅಚ್ಚುಮೆಚ್ಚು
ಹನ್ನೊಂದು ಹೂಗಳಲ್ಲಿ ಅಚ್ಚಮಲ್ಲಿಗೆ ನೀನು
ಹೂವ ಪರೀಮಳ ನೀನು, ಹೂವು ನೀನು...

ಎಂಬ ಕವಿ ಪ್ರೇಯಸಿಯು ತನ್ನ ಪ್ರಿಯಕರನಿಗೆ ಕರೆ ನೀಡಿದ್ದಾಳೆ, ಈ ಜೀವನದ ಸರ್ವ ಐಶ್ವರ್ಯವೆ ತನ್ನ ಪ್ರೇಮಿ ಗೆಳೆಯ ಎಮದು ಅವನ ಹಾಡೆ ಈ ಹಾದಿಗೆ ಬೆಳಕು ಎಂದು ಕನವರಿಸಿದ್ದಾಳೆ.

"ದೀಪಸಾಲಿನ ನಡುವೆ" ಈ ಕವನ ಸಂಕಲನದಲ್ಲಿಯೂ ಕವಿ ಕೆ.ಎಸ್.ನ ರವರು ಹೇಳುವಂತೆ ಹೊಸ ನೋಟ ಬದುಕಿನ ಕಡೆಗಿದೆ. ಇದರಲ್ಲಿ ಹೆಣ್ಣಿನ ಕಲ್ಪನೆಗಳು, ನವೀರಾದ ಸ್ತ್ರೀ ಭಾವನೆಗಳು ಮೂಡಿ ಬಂದಿವೆ.

ಉತ್ತರ
ನೀನೆ ನಾನು
ತಡೆಯುವುದು ಕಷ್ಟ
ಸಿಂಗಾರಮ್ಮ
ಪಾರ್ವತಿ
ಕನ್ನಂಬಾಡಿಯ ಸುಬ್ಬ ಭಟ್ಟರು
ಮಧುಗಿರಿಯಲ್ಲಿ ಕಂಡಾಗ
ಒಲವು ಹುಚ್ಚು

ನೀನು ಯಾರೇ
ಯಾವ ಲೋಕದ ಚಲುವೂ
ನಿನ್ನ ಸ್ವತ್ತು
ಕಾಯ ಬಲ್ಲೆ
ಒಲವೇ ಕಾಪಾಡಲೀ
ನಿನ್ನ ಒಲವು
ಕೇಳಿದ್ದರಾಗಿತ್ತು
ಅನುಭಗಳಾಚೆಗಿದೆ.------ ಕವಿ ಕೆ.ಎಸ್.ನ

ರವರು ಹೆಣ್ಣಿನ ಕಲ್ಪನೆಗಳನ್ನು ಹೃದಯ ತುಂಬಿ ಸಂವೇದನೆಗಳ ರೂಪವನ್ನು ಓದುಗರ ಹೃದಯಾಂತರಾಳಕ್ಕೆ ತುಂಬಿ ಕೊಟ್ಟಿದ್ದಾರೆ.

'ಉತ್ತರ' ಕವನದಲ್ಲಿ ಶ್ರೀಮಂತ ಮನೆತನದ ಪ್ರೇಯಸಿಗೆ ಬಡವನಾದ ಪ್ರಿಯಕರ ಹೇಳುವ ಸಂಭಾಷಣೆ ಇದೆ. ಕವಿ ಭಾವನಾತ್ಮಕವಾಗಿ ತಮ್ಮ ಪ್ರೇಮದ ಶಕ್ತಿಯ ಅಗತ್ಯತೆಯ ಬಗ್ಗೆ ಚಿತ್ರಿಸಿದ್ದಾರೆ.

"ನಿನಗೆ ಭಯವಿಲ್ಲ ನಾನಿನ್ನೊಳಗೆ ಇರುವ ತನಕ
ನಾನಿನ್ನ ಎದೆಯೊಳಗೆ ಇರುವ ತನಕ
ನಾನು ನಿನಗಾಗಿ ಮಾತಾಡುವೆನು ಹಾಡುವೆನು
ಉಸಿರಾಡುವ ಕೂಡ ನಾನೇ ನಾನೇ".---------- ಎಂದು ಕವಿ ನನಗಾಗಿ ಕೊನೆವರೆಗೂ ನೀ ಕಾಯುವ ಹಾಗೆ ಆ ಪ್ರೀತಿಗಾಗಿ ನಾನು ಕಾಯುವೆನು ಭಯ ಪಡಬೇಡ ಎಂದಿದ್ದಾರೆ ಹಾಗೆಯೇ ಸುಂದರವಾದ "ಸಿಂಗಾರಮ್ಮ" ಕವನದಲ್ಲಿ ಜಾತ್ರೆಯಲ್ಲಿ ತೇರಿನ ಸುತ್ತ ಸಿಂಗರಿಸುವ ಸ್ತ್ರೀ ಯ ಬಗ್ಗೆ ಸಂಭ್ರಮದಿಂದ ಬರೆದು ವಿಶೇಷ ವ್ಯಕ್ತಿಯ ಕಡೆ ಗಮನ ಸೆಳೆಯುತ್ತಾರೆ.

"ತೇರ ಸುತ್ತ ರಂಗೋಲಿಯ ಬರೆವಳು
ಸೊಂಟವ ಬಗ್ಗಿಸಿ ಚೆಲುವೆ
ಇರುವವರೆಲ್ಲ ನಮ್ಮವರೇ ಸರಿ
ಎನ್ನುವುದು ಇವಳದೇ ಮಂತ್ರ" ---------- ಎಂದು ಕವಿಯ ಆಕೆಯ ಚೆಲುವು, ಸಾಮಾಜಿಕ ಸಾಮರಸ್ಯದ ಚಾಕಚಕ್ಯತೆ ವಿವರಿಸುತ್ತಾರೆ. 'ಪಾರ್ವತಿ' ಕವನದಲ್ಲಿ ವಸಂತ ಕಾಲದಲ್ಲಿ ಹೂಗಳ ಚಂದದಂತೆ ನಮ್ಮೂರಿಗೆ ಈ ಪಾರ್ವತಿ ಎಂಬ ಹೆಣ್ಣೆ ಅಲಂಕಾರ ಭೂಷಣ. ಪಾತು ಅಂತ ಪ್ರೀತಿಯಿಂದ ಕರೆವುದು ಎಂಬ ಒಲುಮೆಯ ಕಳಕಳಿ ತೋರಿಸಿದ್ದಾರೆ.

"ಹೊಳೆಯ ಬಂಡೆಯ ಮೇಲೆ ನಾ ನಿನ್ನ ಕಂಡೆ
ನಿನ್ನ ಹೆರಳೊಳಗಿತ್ತು ಮಲ್ಲಿಗೆ ದಂಡೆ
ನಿನ್ನ ಹಸೆಯಲ್ಲಿತ್ತು ಕಸ್ತೂರಿ ತಿಲಕ
ಕುಡಿಹುಬ್ಬುಗಳ ನಡುವೆ ಬೈತಲೆಯ ತನಕ"____. ಎಂದು ಕವಿ ಮತ್ತದೇ ಪ್ರೇಯಸಿಯ ಗುಣಗಾನ ಮಾಡಿದ್ದಾರೆ. ಪ್ರಾಸಮಯವಾಗಿದೆ. ಹಾಗೇ ಮಧುಗಿರಿಯಲ್ಲಿ ಕಂಡಾಗ ಕವನದಲ್ಲಿ ಪ್ರೇಯಸಿಯನ್ನು ಮಧುಗಿರಿಯಲ್ಲಿ ಸಂಧಿಸಿದಾಗ ಆದ ಬದಲಾವಣೆಗಳ ಬಗ್ಗೆ ಚಿತ್ರಿಸಿದ್ದಾರೆ ಇಲ್ಲಿಯೂ ಹೂ, ಹಣ್ಣು, ಹೆಣ್ಣು, ಪ್ರೀತಿ ಧಾರಾಳವಾಗಿ ಹರಿದಾಡಿದೆ.

ಕನ್ನಡದ ಒಲುಮೆಯ ಕವಿ ಕೆ.ಎಸ್.ನ ನವರ ಸಮಗ್ರ ಕಾವ್ಯದಲ್ಲಿ ನಾವು ವಿಶೇಷವಾಗಿ ಪ್ರೇಮ, ಧಾಂಪತ್ಯ, ಪ್ರಣಯ, ವಿರಸ, ಸರಸದ ಕವನದ ಕವನಗಳನ್ನು ಕಣ್ತುಂಬ ಕಾಣಬಹುದಾಗಿದೆ. ಸ್ತ್ರೀ ಅಥವಾ ಹೆಣ್ಣಿನ ಕಲ್ಪನೆಯಲ್ಲಿ ಅವರಂತರಾಳದ ಒಲವಿನ ಹೃದಯ ಕೆಲಸ ಮಾಡಿದೆ. ಕೇವಲ ಹೆಣ್ಣು ಎಂಬುದಕ್ಕೆ ಸೀಮಿತವಲ್ಲ. ಈ ಸುಂದರ ಜಗತ್ತಿನ ಅವಿಭಾಜ್ಯ ಅಂಗವೇ ಹೆಣ್ಣು. ಆಕೆಯ ಮಾತೃ ಹೃದಯ ವೈಶಾಲ್ಯತೆಯೇ ಈ ಪ್ರಪಂಚದ ಬುನಾದಿಗೆ ಸೆಲೆಯಾಗಿದೆ. ಜೀವ ಕೊಡುವ, ಪುನರ್‌ಜನ್ಮ ನೀಡುವ ಸ್ತ್ರೀ ವೈಯ್ಯಾರಕ್ಕೇ ಮಾತ್ರವಲ್ಲ ಜೀವನದ ಪ್ರತಿಬಿಂಬ ಎಂಬ ಸಾರ್ವಕಾಲಿಕ ಸತ್ಯ ಸಾರಿದಾರೆ.

ಈ ಎಲ್ಲಾ ಕವನಗಳಲ್ಲಿಯೂ ಬರುವ ನಾನು ನಾನೊಬ್ಬನೇ ಅಲ್ಲ ಮತ್ತು ನೀನು ಎಂದರೆ ನನ್ನ ಮಡದಿಯೇ ಅಲ್ಲ, ಅನುಭವ ನೆನಪು ಇತರ ಅನಿಸಿಕೆಗಳು ಎಲ್ಲಾ ಕವಿಗಳ ಕಾವ್ಯ ಸೃಷ್ಟಿಯ ಸಂಬಂಧರ್ಭದಲ್ಲಿ ದ್ರವ್ಯಗಳಾಗಿವೆ. ಹಿತಮಿತ ಎಂಬ ಅಳತೆಯೇ ಎಲ್ಲ ಕಡೆ ತುಂಬಿದೆ. ಕಾವ್ಯ ಸಂತೋಷದ ಸಾಮಗ್ರಿಯಾದರೆ ಸಾಲದು ಸಾಂತ್ವನ ನೀಡುವ ಕೈಯು ಆಗಬೇಕು. ಚಲುವಿನಿಂದಲೇ ಬದುಕು ಸಹ್ಯವಾಗಿದೆ. ಆಳದ ಅಳಲ ದಾಟಿದ ಹಾಡಾಗಬೇಕೆಂದಿದ್ದಾರೆ.

ಮಲ್ಲಿಗೆಯ ಮಾಲೆ ಕವನದಲ್ಲಿ "ಆಸೆಗಳ ಹಾಡ ಹೊರಟಿದ್ದೇನೆ ರಾಗದೊಳು" ಎಂದಿರುವುದು ಕಾವ್ಯ ಹತಾಶೆಯ ಕಾವ್ಯವಲ್ಲ. ಅದು ನಿರಾಶೆಯನ್ನು ಭೋದಿಸುವುದಿಲ್ಲ. ಅವರ ಕಾವ್ಯ ನಿಸ್ಸಂದೇಹ ವಾಗಿಯೂ ಬೆಳಕು ಹರಡಿ ಸಮಸ್ಯೆಗೆ ಪರಿಹಾರ ಸೂಚಿಸುವಂತದ್ದು. ಯಾರೀಗೂ ನೋವಾಗದಂತೆ ಬದುಕ ಬಯಸುವ ಕೆ.ಎಸ್. ನ ಅವರು ಯಾರ ಮನಸ್ಸನ್ನು ನೋಯಿಸದಂತೆ ಹಾಡಬೇಕುಎಂಬ ಉದ್ದೇಶ ಹೊಂದಿದವರು.

ಕವಿಗೆ ಸತ್ಯ ಮತ್ತು ಗುಣಗಳು ಅವರ ಗುರು, ಮನುಕುಲದ ಋಣ, ಅವರ ಉಸಿರು, ಬಂಧನ ಭ್ರಾಂತಿಗಳ ಅವರ ನೆಲೆ ಅನುಭವದ ಸಹಜ ಕ್ರಾಂತಿ ಅವರ ಕಲೆ ಈ ಎಲ್ಲವೂ ಕವಿಯ ಸಾಮಾಜಿಕತೆ ಅನುಭವ ಪ್ರಾಮಾಣಿಕತೆ ಮತ್ತು ಕಾವ್ಯದ ಕಲಾತ್ಮಕತೆಯನ್ನು ಕುರಿತು ಹೇಳುತ್ತವೆ. ಬದಲಾಗುತ್ತಿರುವ ಕವಿಯ ಮಾರ್ಗಕ್ಕೆ ಕಾರಣವಾಗಿರುವುದು ಅನುಭವದಲ್ಲಾಗುವ ಸಹಜ ವ್ಯತ್ಯಾಸ ಇವರು ಹೇಳುವ ಭಾಷೆಯ ವ್ಯಾಪಕತೆ ಬಹಳ ಸಂದರ್ಭದಲ್ಲಿ ಅನೇಕ ಕವಿಗಳಿಗೆ ಸಾಧಿತವಾಗದ ವಿಷಯ.

ಕೆ.ಎಸ್.ನ ನವರು ಯಾವುದೇಒಂದು ಪ್ರನಾಳಿಕೆ ಇಟ್ಟುಕೊಂಡು ಕಾವ್ಯ ರಚಿಸಿದವರಲ್ಲ ಅದಿದ್ದರೆ ಜನ ಸಮ್ಮುಖತೆ ಮಾತ್ರವಾಗಿತ್ತು. ಅವರು ನಮ್ಮ ಪ್ರಧಾನ ಕವಿಗಳಲ್ಲಿ ಒಬ್ಬರೆಂಬುದು ನಿರ್ವಿವಾದ ಜನ ಮನದಲ್ಲಿ ನಿಲ್ಲುವ ಕಾವ್ಯ ಬರೆದು ಅಪಾರ ಕೀರ್ತಿ ಪಡೆದಿದ್ದಾರೆ ಅವರ ಕಾವ್ಯ ಓದಿ ಹಾಡಿ ಅನೇಕ ಜನ ಪುಳಕಿತರಾಗಿದ್ದಾರೆ. ಮಧ್ಯ ಕಾಲೀನ ಕನ್ನಡ ಕವಿ ರಾಘವಾಂಕ ಜನ ಬದುಕಬೇಕೆಂಬ ಅಪೇಕ್ಷೆಯಿಂದ ಕಾವ್ಯ ಬರೆದೆನೆಂದು ಹೇಳಿಕೊಂಡಿದ್ದಾನೆ. ಹಾಗೇ ಕೆ.ಎಸ್.ನ ನವರು ಜನ ಬದುಕಬೇಕೆಂದು ಬರೆದರು ಅದರಲ್ಲಿ ನಿರಪೇಕ್ಷ ನಿಲುವು ಆಧುನಿಕ ಕನ್ನಡ ಕಾವ್ಯದ ನಿರ್ಮಾಪಕರಲ್ಲಿ ಒಬ್ಬರೆಂದು ಕರೆಸಿಕೊಂಡರು ಕೆ.ಎಸ್.ನ ನವರ ಆ ತುದಿಯಲ್ಲಿ ಮೈಸೂರು ಮಲ್ಲಿಗೆ ಕೃತಿ ಇದೆ. ಈ ತುದಿಯಲ್ಲಿ ತೆರೆದ ಬಾಗಿಲು ಕೃತಿ ಇದೆ. ಈ ಎರಡು ಸೇರಿಕೊಂಡಂತೆ ನಡುವೆ ಅವರ ಮಹತ್ವದ ಕಾವ್ಯ ನಿರ್ಮಾಣವಾಗಿದೆ. ಭಾವದೀಪ್ತ ಅರ್ಥ ಮುಕ್ತ ಎಂಬಂತೆ ಹೊಸಗನ್ನಡ ಕವಿತೆಯ ಅವಿಭಾಜ್ಯ ಅಂಗವಾಗಿದ್ದು. ಅಂದು ವಿಶಿಷ್ಟ ಧ್ವನಿಯಾಗಿಯು ಕಾಣಿಸಿಕೊಂಡಿರುವುದು ಮಹತ್ವದ ವಿಚಾರ.

ಒಟ್ಟರೆ ಕೆ.ಎಸ್.ನರಸಿಂಹ ಸ್ವಾಮಿಯವರ ಸಾಹಿತ್ಯಕ ಸಾಧನೆ ಮತ್ತು ಕೊಡುಗೆ ಕನ್ನಡ ಸಾಹಿತ್ಯಕ್ಕೆ ಮಹತ್ವಪೂರ್ಣವಾದುದು. ಅವರ ಕವಿತೆಗಳಲ್ಲಿ ಮುಗ್ದ, ಸರಳ ನಿರಾಡಾಂಭರ ಶೈಲಿಯಿಂದ ಓದುಗರಿಗೆ ಆತ್ಮೀಯರಾಗುತ್ತಾರೆ. ಈ ಎಲ್ಲಾ ದೃಷ್ಟಿಯಿಂದ ಕೆ.ಎಸ್. ನವರು ಕನ್ನಡದ ಸರಸ್ವತ ಲೋಕದಲ್ಲಿ ವಿಶೇಷವಾಗಿ ನಿಲ್ಲಬಲ್ಲ ಕವಿಯಾಗಿ ಕನ್ನಡಿಗರ ಮನೆ ಮನಗಳಲ್ಲಿ ಉಳಿದಿದ್ದಾರೆ.

## ಉಪಸಂಹಾರ

ಕೆ.ಎಸ್.ನರಸಿಂಹಸ್ವಾಮಿಯವರು ಆಧುನಿಕ ಕನ್ನಡ ಕಾವ್ಯ ಸಂದರ್ಭದಲ್ಲಿ ಮುಖ್ಯರಾಗುತ್ತಾರೆ. ಭಾವ ರಮ್ಯತೆಯಿಂದ ಚಿಂತನಶೀಲತೆಗೆ ಅವರ ಕಾವ್ಯ ವಿಕಾಸಗೊಂಡುದು ಒಂದು ಸ್ವಾರಸ್ಯಕರ ವಿಷಯ. ನವೋದಯ ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಈ ಎಲ್ಲಾ ಮಾರ್ಗಗಳ ಸಮಯದಲ್ಲೂ ಕಾವ್ಯ ರಚಿಸುತ್ತಾ ಪ್ರತಿಕ್ರಿಯಿಸುತ್ತಾ ಬಂದರಾದರೂ ಯಾವ ಮಾರ್ಗಕ್ಕೂ ಖಚಿತವಾಗಿ ಸೇರಲಿಲ್ಲ. ಎಲ್ಲಾ ಮಾರ್ಗಗಳ ಗುಣಾಂಶಗಳನ್ನು ಒಳಗೊಂಡು ಭಾಷೆಗಳಿಗೆ ಅವರಂತೆ ಮಿಡಿದವರು ವಿರಳ.

ಕೆ.ಎಸ್.ನ ರವರಂತೆ ಜನಸಾಮಾನ್ಯರ ಹತ್ತಿರಕ್ಕೆ ಕಾವ್ಯವನ್ನು ತೆಗೆದುಕೊಂಡು ಹೋದವರು ಬಹಳ ವಿರಳ. ಕಾವ್ಯಕ್ಕೆ ಓದುಗ ವರ್ಗವನ್ನು ಹೆಚ್ಚಿಸಿದ ಕೀರ್ತಿ ಅವರದು. ಕವಿಯ ಸರಳವು ಸುಸಂಸ್ಕೃತವು ಆದ ಅವರ ಕಾವ್ಯ ನಾಡಿನಾದ್ಯಂತ ಸದಭಿರುಚಿಯ ನಸು ನಗೆಯ ಅಲೆಯೊಂದನ್ನು ಹುಟ್ಟಿ ಹಾಕಿದ್ದು ಇತಿಹಾಸ.

ಹಾಗೆಯೇ ಅವರೆಂದು ಸಮಕಾಲೀನ ಸಾಮಾಜಿಕ ಸಮಸ್ಯೆಗಳಿಗೆ ಕಣ್ಣು ಮುಚ್ಚಿ ಕುಳಿತುಕೊಂಡವರಲ್ಲ. ಅವರ ಕಾವ್ಯ ಕ್ರಮೇಣ ಸಮಾಜಮುಖಿಯು, ತತ್ವಮುಖಿಯೂ ಆಗಿಯೂ ಬೆಳೆದಿದೆ. ಜೀವನ ಮುಖಿಯಾದ ಅವರ ಕಾವ್ಯ ಯಾವತ್ತು ಅಪೇಕ್ಷಣೀಯವಾದುದು. ಮಾನವೀಯ ಸ್ಪಂದನೆಗಳಿಗೆ ಅವರ ಕಾವ್ಯ ಮಿಡಿದಿದೆ.

ಕೆ.ಎಸ್.ನ ರವರಿಗೆ ಜನಸಾಮಾನ್ಯರ ಸುಖ-ದುಃಖಗಳನ್ನು ಗಮನದಲ್ಲಿರಿಸಿಕೊಂಡು ಅದಕ್ಕೆ ಉಲ್ಲಾಸವನ್ನು, ಸಾಂತ್ವನವನ್ನು ನೀಡಬೇಕೆಂಬುದು ಆಶಯವಾಗಿತ್ತು. ಒಂದು ಆರೋಗ್ಯಪೂರ್ಣ ಸಮಶಜವನ್ನು ಕಟ್ಟಬೇಕೆಂಬ ಧೋರಣೆಯ ಕನಸು ಹೊತ್ತದ್ದು ಅವರ ಕಾವ್ಯ. ಅದರಲ್ಲಿ ನಿರ್ಮಲ ಗಂಗೆಯಂತೆ ಹರಿಯುವ ಕವಿಯ ಮನಸ್ಸು ಆರ್ತರ, ಶ್ರಮಿಕರ, ದುಃಖಿತರ ಮತ್ತು ಶೋಷಿತರ ಪರವಾದ ಒಲವನ್ನು ತೋರುತ್ತಾ ಬಂದಿರುವುದು ಅತಿಶಯ. ಅವರ ಕಾವ್ಯ ಮೆದುವಷ್ಟೆ ಅಲ್ಲ ಹೋರಾಟದ ದನಿಗೂ ಅಭಿವ್ಯಕ್ತಿ ನೀಡಿದೆ. ಅಹಂಕಾರರಾಹಿತ್ಯ ಸ್ವಾಭಿಮಾನದ ಕಾವ್ಯ ಕೊಟ್ಟ ಕೀರ್ತಿ ಅವರದ್ದು.

ಇಂಗ್ಲೀಷಿನಲ್ಲಿ ಕವನ ರಚಿಸುವುದರ ಮೂಲಕ ಆರಂಭವಾದ ಕವಿಯ ಕಾವ್ಯ ಜೀವನ ಕನ್ನಡದಲ್ಲಿ ಸಮೃದ್ಧವಾದ ಕಾವ್ಯ ನಿರ್ಮಾಣಕ್ಕೆ ಕಾರಣವಾಗಿದೆ. ಮೊದಲ ದಿನಗಳಲ್ಲಿ ಬರ್ನ್ಸ್ ಕವಿಯ ಪ್ರಭಾವಕ್ಕೆ ಒಳಗಾಗಿ ಕಾವ್ಯ ನಿರ್ಮಾಣಕ್ಕೆ ಕಾರಣವಾಗಿದೆ.

ಈ ಸಂದರ್ಭದಲ್ಲಿ ಹದಿನೆಂಟರ ಕವಿಗೆ ಬರ್ನ್ಸ್ ಕವಿ ಹುಚ್ಚು ಹಿಡಿಸಿದ. ದಿನ ನಿತ್ಯದ ಅನುಭವಗಳನ್ನು ಕಾವ್ಯಕ್ಕೆ ವಸ್ತುವನ್ನಾಗಿ ಮಾಡಿಕೊಳ್ಳುವ ಅವನ ಕೌಶಲ, ಜನ ಆಡುವ ಮಾತುಗಳನ್ನು ಕಾವ್ಯಕ್ಕಾಗಿ ಉಪಯೋಗಿಸಿಕೊಂಡು ಸಣ್ಣ ಸಣ್ಣ ಮಾತುಗಳು ದೊಡ್ಡದನ್ನು ಸಾಧಿಸುವಂತೆ ಮಾಡಿದ ಅವನ ಚಮತ್ಕಾರ ಇವು ಅವರನ್ನು ಮರಳು ಮಾಡಿದವು.

ಹೊಸದನ್ನು ಹೇಳುವುದು, ಹೊಸದಾಗಿ ಹೇಳುವುದಕ್ಕಿಂತಲು ಹೆಚ್ಚಿನ ಕೆಲಸವೆನಿಸುವುದಕ್ಕೂ ಅವನೇ ಕಾರಣ. ಹೇಳುವುದಕ್ಕೆ ತೆಳುವಾದ ಹಾಸ್ಯವನ್ನು ಬೆರೆಸಿದರೆ ಮಾತು ಮನ ಮುಟ್ಟುವಂತಾಗುವುದು ಎನ್ನುವುದನ್ನು ಕಲಿಸಿದ ಕವಿ ಬರ್ನ್ಸ್ ಎಂದು ರಾಮಚಂದ್ರ ಶರ್ಮ ಹೇಳಿರುವ ಮಾತುಗಳು ಉಲ್ಲೇಖನೀಯ.

ಹೀಗೆ ಕವಿ ತಮ್ಮ ಅಭಿವ್ಯಕ್ತಿಯಲ್ಲಿ ಭಿನ್ನವಾದ ಕಾವ್ಯ ರಚಿಸುವುದರ ಕಡೆಗೆ ಗಮನ ಹರಿಸಿದರು. ಸಾಮಾನ್ಯ ಮಾನವ ಬದುಕಿನ ವಿವಿದ ನೆಲೆಗಳನ್ನು ವಿವಿಧ ನೋಟಗಳಲ್ಲಿ ಕಂಡು ಚಿತ್ರಿಸಿದರು. ಅನುಭವದ ಏಕ ಮಗ್ಗುಲಿಗಿಂತ ಅನೇಕ

ಮಗ್ಗುಲುಗಳನ್ನು ಅನಾವರಣ ಮಾಡುವುದು ಕವಿಯ ಗುರುಯಾಗಿತ್ತು ಇದನ್ನು ಅವರ ಕಾವ್ಯದ ಬೆಳವಣಿಗೆಯೇ ವಿವಿಧ ಮಜಲುಗಳಲ್ಲಿ ಕಾಣಬಹುದು.

ಕೆ.ಎಸ್.ನ ರವರು ಬಿ.ಎಂ.ಶ್ರೀ ಮತ್ತು ಜನಪದ ಸಾಹಿತ್ಯದಿಂದಲೂ ತಮ್ಮ ಕಾವ್ಯ ಮಾದರಿಯನ್ನು ಸ್ವೀಕರಿಸಿದರು. ಸ್ವತಂತ್ರ ಸೃಜನಶೀಲತೆ ಪಡೆದರು. ಕವಿ ಸಾಮಾನ್ಯ ಜನರ ಬದುಕು ಭಾಷೆಯನ್ನು ತಮ್ಮ ಕಾವ್ಯದ ಅನುಭವ ಮತ್ತು ಅಭಿವ್ಯಕ್ತಿಯನ್ನಾಗಿ ಮಾಡಿಕೊಂಡು ಹಳ್ಳಿ ಮತ್ತು ಪಟ್ಟಣ ಎರಡನ್ನು ಸೇರಿಸಿದ್ದಾರೆ.

ಕೆ.ಎಸ್.ನ ರವರ ಕಾವ್ಯ ಸಮಾಜ ಕೇಂದ್ರಿತವಾಗಿರುವುದಕ್ಕಿಂತ ಕುಟುಂಬ ಕೇಂದ್ರಿದವಾದುದು. ಅಲ್ಲಿ ಕುಟುಂಬದ ಆಶಯಗಳು ಮತ್ತು ಸ್ವಾರಸ್ಯಪೂರ್ಣ ಪಾತ್ರಗಳು ಮುಖ್ಯವಾಗುತ್ತವೆ. ಮೈಸೂರು ಮಲ್ಲಿಗೆಯಲ್ಲಿ ಪ್ರಕಟವಾದ ಸಂವೇದನೆ ಕ್ರಾಂತಿಕಾರಕವಾದುದಲ್ಲ, ಸಾಂಪ್ರದಾಯಿಕವಾದುದಲ್ಲ. ಆದರೂ ಅಭಿರುಚಿಯಲ್ಲಿ ದೊಡ್ಡ ಬದಲಾವಣೆ ತರುವಷ್ಟು ಸಾಮರ್ಥ್ಯ ಅದರಲ್ಲಿತ್ತು. ಎಂಬುದು ಮಾತ್ರ ಸತ್ಯವಾದುದು. ಪ್ರೀತಿಯ ಮಹತ್ವ ಹಾಗೂ ಅನ್ಯೋನ್ಯ ಮಧುರ ದಾಂಪ್ಯತ್ಯದ ವಾಸ್ತವಾಧಾರಿತ ಕನಸುಗಾರಿಕೆಯನ್ನು ಈ ಕವನಗಳಲ್ಲಿ ಕಾಣಬಹುದಾಗಿದೆ. ವೈವಾಹಿಕ ಮತ್ತು ಕೌಟುಂಬಿಕ ವ್ಯವಸ್ಥೆಗಳು ಸಡಿಲಗೊಳ್ಳುತ್ತಿರುವ ಅಥವಾ ಸಂಕೀರ್ಣಗೊಳ್ಳುತ್ತಿರುವ ಇಂದಿನ ವ್ಯವಸ್ಥೆಗೆ ಕವಿ ಚಿತ್ರಿಸಿರುವ ಪ್ರಪಂಚ ಹಳೆಯದಂತೆ ಕಾಣಬಹುದು. ಸಾಮಾಜಿಕ ಮೌಲ್ಯವನ್ನು ಕುಟುಂಬದ ಚೌಕಟ್ಟಿನಲ್ಲಿ ಕಟ್ಟುವುದು ಈ ಕವನಗಳ ಕರ್ತವ್ಯವಾಗಿತ್ತು.

ಕವಿ ಕೆ.ಎಸ್.ನ ರವರು ಕಾಣುವುದು ಈ ಕವಿತೆಗಳಲ್ಲಿ ಚೆಲುವನ್ನು ಮಾತ್ರವಲ್ಲ, ಅರಿವನ್ನು ಸಹ, ಸೌಂದರ್ಯ, ಜೀವನ ಮೀಮಾಂಸೆಗಳೆರಡು ಇಲ್ಲಿ ಸಮಾವೇಶಗೊಂಡಿವೆ. ಕೆ.ಎಸ್.ನ ರವರ ಕವಿತೆಗಳ ವೈಶಿಷ್ಟಗಳಲ್ಲಿ ಹೆಣ್ಣಿಗೆ ನೀಡಿದ ಮಹತ್ವದ ಸ್ಥಾನವೂ ಒಂದು. ಈ ಕುರಿತ ಯಾವ ಚಳುವಳಿಯು ಇಲ್ಲದ ಕಾಲದಲ್ಲಿ ಅವರು ಸ್ತ್ರೀಗೆ ಕೊಟ್ಟ ಪ್ರಾಮುಖ್ಯತೆ ಗಮನಾರ್ಹ. ಆದರೆ ಇಲ್ಲಿಯು ಹೆಣ್ಣನ್ನು ಕಂಡಿರುವುದು ಬಹುತೇಕ ಪುರುಷದೃಷ್ಟಿಯ ಮೂಲಕವಾಗಿಯೆ. ಇಷ್ಟಾದರೂ ಅವಳು ರೂಪಿಸುವ ಕುಟುಂಬದ ಬದುಕನ್ನು ಪ್ರವೃತ್ತಿಗಳ ಮೇಲೆ ನೋಡದೆ ಸಂಸ್ಕೃತಿಯ ಮೇಲೆ ನೋಡಿರುವುದು ವಿಶೇಷವಾಗಿದೆ. ಕವಿ ಚಿತ್ರಿಸುವ ಪ್ರೀತಿ, ಪ್ರಣಯ, ದಾಂಪತ್ಯ, ಕುಟುಂಬ ಮುಂತಾದ ವಿಷಯಗಳಿಗೆ ಇಲ್ಲಿ ಮೆರುಗು ಬಂದಿದೆ ಎಂಬುದು ಸತ್ಯ. ಕಲ್ಪನಾಂಶವೂ ಸೇರಿದೆ. ಆದರೆ ಇದೆಲ್ಲ ಅನುಭವದ ಮೇಲೆ ನಿಂತಿರುವಂಥದ್ದು. ಈ ಅನುಭವ ವೈಯಕ್ತಿಕವಾದುದಲ್ಲ ಸಾಮಾಜಿಕವಾದುದು.

ಕವಿ ಆರಂಬದಲ್ಲಿ ಪ್ರಣಯವನ್ನೆ ಕಾವ್ಯವಸ್ತುವಾಗಿ ಮಾಡಿಕೊಂಡೂ ಆಮೇಲೆ ಇತರ ಮುಖಗಳ ಕಡೆಗೆ ತಿರುಗಿದರು.. ಹಾಗೆ ತಿರುಗಿದ್ದು ಅನಂತರ ಹೆಚ್ಚಿನ ತಾತ್ವಿಕತೆಯಲ್ಲಿ ಅದು ಕಾಣಿಸಿಕೊಂಡಿದ್ದು ಉಂಟು. ಕವಿಯ ಕವಿತೆಗಳಲ್ಲಿ ಇತರ ವಿಷಯಗಳಲ್ಲಿ ಯಾವುದರಿಂದ ಸೀಮಿತತೆ ಕಂಡರು ಅವುಗಳ ಪ್ರಪಂಚದಲ್ಲಿ ಪೂರ್ಣ ಚಿತ್ರವನ್ನು ಅವು ಒದಗಿಸುತ್ತದೆ. ಶಿಲಾಲತೆ, ದೀಪದಮಲ್ಲಿ, ಉಂಗುರಗಳಲ್ಲಿಯು ಕಾಣ ಬರುತ್ತದೆ. ಎಲ್ಲಾ ಕುರುಹುಗಳು ಸ್ತ್ರೀಯ ಬಗೆಗೆ ವಿವರಿಸಿವೆ.

ಕೆ.ಎಸ್.ನ ರವರ ಕವಿತೆಗಳಲ್ಲಿ ಆಶ್ಚರ್ಯ ತರಿಸುವಂತಹ ವಿಷಯವೆ ಸಂವಾದ ಚಾತುರ್ಯ. ವ್ಯಕ್ತಿ ಆಕೆಯ ಬಗ್ಗೆ ಕುರಿತು ಹೇಳುತ್ತಾ ಹೋಗುವ ಅದರ ತಂತ್ರದಿಂದ ಕಾವ್ಯಕ್ಕೆ ಆಗಿರುವ ಧ್ವನಿ ಅನನ್ಯವಾದುದೆ ಸರಿ. ಈ ಬಗೆಯ ಪ್ರಯೋಗ ಬೇರೆ ಯಾರಲ್ಲು ಕಾಣದಿರುವುದು ಆಸಕ್ತ ವಿಚಾರ. ಕಾವ್ಯ ಯಾವುದೇ ಹಂತದ್ದಾಗಿರಲಿ ಕೆ.ಎಸ್.ನವರ ಕಾವ್ಯ ಶಕ್ತಿ ಮಾತ್ರ. ಅನುಭವ ಅರಿಸುವ, ಅದನ್ನು ಕಾವ್ಯಕ್ಕೆ ಹೊಂದಿಸುವ ಅವರ ಪ್ರತಿಭಾಶಕ್ತಿ ಮಾತ್ರ ಮಹತ್ವದ್ದೆನಿಸುತ್ತದೆ. ಕೆ.ಎಸ್.ನ ರವರ ನವ್ಯ

ಮಾದರಿಯ ಕಾವ್ಯ ಕ್ಲಿಷ್ಟತೆ ಮತ್ತು ಅಸ್ಪಷ್ಟತೆಯಂತಹ ಸಮಸ್ಯೆಯನ್ನು ಎದುರಿಸಬೇಕಾಗಿ ಬಂದಿತು. ಆದಕ್ಕೆ ಎಂದಿನ ಕಾವ್ಯಶೈಲಿಗೆ ಕವಿ ವಾಪಾಸಾದರು.

ಕೆ.ಎಸ್.ನ ರವರಿಗೆ ತಮ್ಮ ಕಾವ್ಯ ವಸ್ತುವಿನ ಬಗ್ಗೆ ಚೆನ್ನಾಗಿ ಅರಿವಿತ್ತು. ಅದರ ಮಿತಿ ಮತ್ತು ಸಾಧ್ಯತೆಗಳ ಬಗ್ಗೆಯು ಅವರಿಗೆ ತಿಳಿದಿತ್ತು. ಅವರಿಗೆ ಇದು ಗೊತ್ತಾದಂತೆ ಕವಿ ತಮ್ಮ ಬರವಣಿಗೆಯನ್ನು ಬದಲಾಯಿಸುತ್ತಾ ಹೋದರು. ಅರ್ಥಾತ್ ಬೆಳೆಯುತ್ತಾ ಹೋದರು ಹೀಗಾಗಿ ಕವಿಯದ್ದು ಪ್ರಯೋಗಶೀಲ ವಿಕಾಸಶೀಲ ಕಾವ್ಯವಾಗಿ ಮುಂದುವರಿಯಿತು. ಇದರಿಂದ ವಿಷಯ ವೈಭವ ಮತ್ತು ಅನುಭವ ವೈವಿಧ್ಯಗಳು ಕಾಣಿಸಿದವು. ಕವಿಯ ಬಹುತೇಕ ಕವನಗಳ ಬೆನ್ನೆಲುಬು ಕಥಾತ್ಮಕತೆ, ಸಂವಾದ, ಸಂಭಾಷಣೆ ತಂತ್ರವಿದೆ.

ದಾಂಪತ್ಯ ಜೀವನದ ಪರಿಭಾವನೆ ಮತ್ತು ಪರಿಶೀಲನೆಗಳು ಕವಿಯ ಕಾವ್ಯದ ಒಳನೋಟಗಳಿಗೆ ಕಾರಣವಾಗಿದೆ. ಸಣ್ಣ ಸಣ್ಣ ಸಂಗತಿಗಳನ್ನು ಕಾವ್ಯಮಾಡುವ ಕಲೆ ಕವಿಗೆ ಕರಗತವಾಗಿದೆ. ಯಾವುದೇ ವಸ್ತು ವಿಷಯವನ್ನು ಅವರು ಒಲಿಸಿಕೊಳ್ಳಬಲ್ಲರು. ನೂಲು ಯಾವುದೆ ಆಗಿರಲಿ ಎಲ್ಲಿಯದೆ ಆಗಿರಲಿ ಅದರಿಂದ ಪೀತಾಂಬರ ಮಾಡುವ ಕೌಶಲ ಕವಿಯದು.

ಕೆ.ಎಸ್.ನ ರವರ ಸಣ್ಣ ಸಂಗತಿ ಕವನ ತಾಯಿ ಮತ್ತು ಮಗುವಿನ ಮಧುರ ಸಂಬಂಧವನ್ನು ಮತ್ತದರ ಸೂಕ್ಷ್ಮವನ್ನು ಕವನ ಬಣ್ಣಿಸುತ್ತದೆ. ಹೊದಿಸಿದ ಬಟ್ಟೆಯನ್ನು ಮಗು ಒದ್ದು ತೆಗೆಯುವುದು, ನಿದ್ದೆಗಣ್ಣಿನಲ್ಲಿಯೇ ತಾಯಿ ಅದನ್ನು ಸರಿಪಡಿಸುವುದು, ಈ ಕ್ರಿಯೆ ಕವನದಲ್ಲಿ ಅಪರೂಪದ ದೃಶ್ಯವನ್ನು ಸೃಷ್ಟಿಸುವುದು. ಹೊಕ್ಕಳ ಬಳ್ಳಿಯ ಈ ಸಂಬಂಧ ವ್ಯಾಖ್ಯಾನಕ್ಕೆ ನಿಲುಕದ್ದು, ಅನುಭವಗಮ್ಯವಾದುದು ಪರಿಣಾಮಕಾರಿಯಾದ ಕವನದ ಆಸಾಲುಗಳು ಹೀಗಿದೆ.

- ನಿದ್ದೆ ಎಚ್ಚರಗಳಲಿ ಪೊರೆವ ಕೈ ದುಡಿಯುತಿದೆ

ಅದನು ಲೆಕ್ಕಿಸದೆ ಮಗು ಹೊದಿಕೆಯನು ಒದೆಯುತಿದೆ........ಈ ಕವನ ನೀಡುವ ವಿಶೇಷ ಭಾವಾನುಭವದ ಪರಿಣಾಮದಿಂದಾಗಿ ಇದು ಸಣ್ಣ ಸಂಗತಿಯಲ್ಲ ಎಂಬುದು ಸ್ಪಷ್ಟವಾಗುವುದು. ಸೃಷ್ಟಿಕರ್ತ ಮತ್ತು ಅವನ ಮಕ್ಕಳ ಚರಿತ್ರೆಗೆ ಕವನ ಬೆಳೆಯವುದು. ದೇವರು ಸದಾ ಪೊರೆವ ಕೈ ಮತ್ತು ಮನುಷ್ಯ ಅದಕ್ಕೆ ತೋರುವ ನಿರ್ಲಕ್ಷ್ಯದ ಪರಿಗೆ ಕವನದ ವಾತಾವರಣದ ಹೊದಿಕೆಯಿರುವುದನ್ನು ಕಡೆಯ ಸಾಲುಗಳು ಮನದಟ್ಟು ಮಾಡಿಕೊಡುತ್ತವೆ. ಇದೆಲ್ಲವು ಗದ್ಯಕ್ಕೆ ಹತ್ತಿರವಾದ ಕವನವಾಗಿವೆ. ಸಣ್ಣ ಸಂಗತಿಯಲ್ಲು ಕವಿಯ ಕಣ್ಣು ಅರ್ಥವಂತಿಕೆಯನ್ನು ಕಾಣಬಹುದಾಗಿದೆ.

ಕೆ.ಎಸ್.ನ ರವರು ಪ್ರಾಸ ಎಲ್ಲೆಲ್ಲಿ ಸಹಜವಾಗಿ ಬೇಕೊ ಅಲ್ಲಲ್ಲಿ ಸ್ವೀಕರಿಸಿದ್ದಾರೆ. ಕೇವಲ ಪ್ರಾಸಕ್ಕಾಗಿಯೇ ಭಾವನೆಗಳನ್ನು ತಿರುಚಲು ಯತ್ನಿಸಿಲ್ಲ.

# ಆಕರ ಗ್ರಂಥಗಳು


* ನುಡಿಮಲ್ಲಿಗೆ -------> ಪುಟ - 18,19.1,10,9,22,50,80

* ಮಲ್ಲಿಗೆಯ ಮಾಲೆ ಮುನ್ನುಡಿ -------> ಪುಟ - 1,2,5,6-8

* ಇಹದ ಪರಿಮಳದ ಹಾದಿ -------> ಪುಟ - 17,18,34,68,103,125,127-158

* ಚಂದನ -------> ಪುಟ - 12,16,5,75,290

* ಸಂಜೆಹಾಡು ' -------> ಪುಟ - 49,81,65

* ಮನ್ವಂತರ, ದ್ವಿತೀಯ ಸಂಪುಟ -------> ಪುಟ - 71,76,81,2

* ಬಾಳ ಹಾದಿ -------> ಪುಟ - 71

* ಮಲ್ಲಿಗೆಯ ಮಾಲೆ ಅನುಬಂಧಗಳು -------> ಪುಟ - 1-6

* ಶಿಲಾಲತೆ ಮನ್ನುಡಿ -------> ಪುಟ - 1-2

* ದುಂಡುಮಲ್ಲಿಗೆ ಮುನ್ನುಡಿ -------> ಪುಟ - 1-4

* "ಬೇರು,ಕಾಂಡ,ಚಿಗುರು" -------> ಪುಟ - 224

* ಕೆ.ಎಸ್.ನರಸಿಂಹಸ್ವಾಮಿ ---> ಪುಟ - 11-22,23-28,31-45,48-60,62-90,122-144

  (ಡಾ|| ರಾಮೇಗೌಡ)


ಡಾ|| ಸೀತಾ. ಎಚ್.ಎಸ್., ಎಂ.ಎ., ಪಿ.ಹೆಚ್.ಡಿ.
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ನಂಜನಗೂಡು, ಮೈಸೂರು ಜಿಲ್ಲೆ.